# ಸುಬೋಧ ಪ್ರಕಟನಾಲಯ

## ಬೆಂಗಳೂರು ನಗರ.

## ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

### (ಸಚಿತ್ರ ಮಾಸಪುಸ್ತಕಾವಳಿ)

ಭಾರತದೇಶದಲ್ಲಿ ಆದಿಕಾವ್ಯವೆಂದು ಸುಪ್ರಸಿದ್ಧವಾದ ಶ್ರೀ ರಾಮಾಯಣದ ಅತಿ ಮುಖ್ಯ ಕಥಾಸಾರವು 'ಸುಬೋಧ ಕುಸುಮಾಂಜಲಿ ಗ್ರಂಥಮಾಲೆ'ಯು ಸುಮನೋಹರ ತಿಳಿಗನ್ನಡ ಶೈಲಿಯಲ್ಲಿ ಬರೆಯಲ್ಪಟ್ಟಿದೆ. ಕಿಷ್ಕಿಂಧಾ ಕಾಂಡದೊಂದಿಗೆ ಪೂರ್ತಿಯಾದ ೧ನೆಯ ಭಾಗವು ಸಿದ್ಧವಾಗಿದೆ. ಪುಟ ಸಂಖ್ಯೆ ೩೮೫. ಉತ್ತಮ ಪ್ರತಿ ರೂ. ೨—೦—೦. ಸಾಮಾನ್ಯ ಪ್ರತಿ ೧—೮—೦. ಟ. ಖ. ಪ್ರತ್ಯೇಕ. ಈ ದಿನವೇ ತರಿಸಿಕೊಳ್ಳಿ.

## ಸು ಬೋ ಧ

### (ತಿಳಿಗನ್ನಡ ಸಚಿತ್ರಮಾಸಪತ್ರಿಕೆ)

ಧಾರ್ಮಿಕ, ನೈತಿಕ, ಸಾಮಾಜಿಕ, ವಿದ್ಯಾವಿಷಯಕವಾದ ವಿವಿಧಲೇಖನಗಳು ಕರ್ನಾಟಕದ ಸುಪ್ರಸಿದ್ಧ ಲೇಖಕರಿಂದ ಬರೆಯಲ್ಪಟ್ಟು ಪ್ರಕಟವಾಗುವುವು. ಕ್ರೌನ್ ಕ್ವಾರ್ಟೋ ೬೦ ಪುಟಗಳು.

ವಾ. ಚಂ. ನಾಲ್ಕು ರೂಪಾಯಿ ಮಾದರಿ ಪ್ರತಿ ೦—೬—೮.
(ವಿ. ಪಿ. ಮೂಲಕ ರೂ. ೪—೪—೦).

## ನಗುವ - ನಂದ

### (ಹಾಸ್ಯರಸಪ್ರಧಾನವಾದ ಸಚಿತ್ರಮಾಸಪತ್ರಿಕೆ)

ಮನೋರಂಜಕ ಲೇಖನ - ಕತೆ - ಕವಿತೆ ವ್ಯಂಗಚಿತ್ರಗಳನ್ನೊಳಗೊಂಡು
ಜನಮನರಂಜನೆಯನ್ನುಂಟುಮಾಡುವ ಶ್ರೇಷ್ಠವರ್ಗದ
ಸಚಿತ್ರಮಾಸಪತ್ರಿಕೆ. ಬಿಡಿ ಪ್ರತಿ ಒಂದಾಣೆ.

ವಾ. ಚಂ. ಸ್ಥಳದಲ್ಲಿ ೧-೦-೦. ಪರಸ್ಥಳಕ್ಕೆ ಮ. ಆ. ಮೂಲಕ ೧-೦-೦.
(ವಿ. ಪಿ. ಮೂಲಕ ೧—೪—೦).

॥ ಶ್ರೀರಾಮ ಸಹಾಯಂ ॥

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ನವ ಕುಸುಮ ಮಾಲಾ)

**ಮುನ್ನುಡಿ:—**

ಲೋಕದ ಮಾನವ ವರ್ಗದಲ್ಲಿ, ವಿಧೇಯತೆ, ಭ್ರಾತೃಪ್ರೇಮ, ನಿಸ್ವಾರ್ಥಸೇವೆ, ಜಿತೇಂದ್ರಿಯತ್ವ ಮುಂತಾದ ಗುಣಗಳ ಅವತಾರಮೂರ್ತಿಯೆಂದರೆ ನಮ್ಮ ಕಥಾನಾಯಕನಾದ ಸೌಮಿತ್ರಿಯೇ! ಈ ಮಹಾನುಭಾವನು. ತನ್ನ ಅಣ್ಣನಾದ ಶ್ರೀರಾಮನ ಸೇವೆಗಾಗಿಯೇ ಜನ್ಮವೆತ್ತಿದವನೋ ಎಂಬಂತೆ, ಆ ಒಂದು ಕಾರ್ಯಕ್ಕಾಗಿಯೇ ತನ್ನ ತನುಮನಧನಗಳನ್ನೆಲ್ಲ ಸಮರ್ಪಿಸಿ, ಧನ್ಯತೆಯನ್ನು ಹೊಂದಿದನು. ಈತನ ಆದ್ಯಂತ ಜೀವಿತಕಾಲದಲ್ಲಿ, ತನಗಾಗಿ, ತನ್ನ ಸುಖಕ್ಕಾಗಿ, ಅಥವ ತನ್ನ ಹೆಂಡತಿ ಮಕ್ಕಳಿಗಾಗಿ ಎಂಬದಾಗಿ ಯಾವ ಸಂಗ್ರಹವನ್ನೂ ಮಾಡಿಕೊಂಡಂತೆ ಕಂಡುಬಾರದು. ಸೌಮಿತ್ರಿಯ ಜೀವಿತವೆಂದರೆ ಶ್ರೀ ಸೀತಾರಾಮರ ಸೇವೆಗಾಗಿ! ಹೀಗೆ ಕೇವಲ ನಿಸ್ವಾರ್ಥಸೇವಾಮಗ್ನರಾಗಿ ಜೀವಿಸಿದ ಮಾನವೋತ್ತಮರು ಲೋಕದ ಚರಿತ್ರೆಯಲ್ಲಿ ಬಹುಮಂದಿ ದೊರೆಯುವುದಿಲ್ಲ. ಆದುದರಿಂದ ಈ ಮಹನೀಯನ ಜೀವಿತ ರಹಸ್ಯವನ್ನು ತಿಳಿಯುವುದು ಆವಶ್ಯಕವಿದೆ.

ಸೌಮಿತ್ರಿಯೆಂದರೆ, ದಶರಥರಾಜನ ಪತ್ನಿ ಸುಮಿತ್ರೆಯ ಉದರಸಂಭೂತನಾದ ಲಕ್ಷ್ಮಣಸ್ವಾಮಿಯು. ಲಕ್ಷ್ಮಣನು ಶ್ರೀರಾಮನಿಗೆ ಮೆಚುಗೆಯ ತಮ್ಮನು; ಮಾತ್ರವಲ್ಲ-ವಿಧೇಯನಾದ ಭಂಟನಾಗಿಯೂ ಇದ್ದನು. ಶ್ರೀರಾಮನೆಲ್ಲಿದ್ದರೆ ಅಲ್ಲಿ ಲಕ್ಷ್ಮಣನಿಲ್ಲದಿಲ್ಲ. 'ರಾಮ ಲಕ್ಷ್ಮಣರು' ಎಂಬ ಮಾತು ಒಂದೇ ಪದವೋ ಎಂಬಂತೆ ಉಪಯೋಗಿಸಲ್ಪಡುತ್ತಿದೆ. ಶ್ರೀರಾಮನ ಜನನಾರಭ್ಯ, ಸೌಮಿತ್ರಿಯು ಆತನ ಕಷ್ಟಗಳಲ್ಲಿ, ದುಃಖಗಳಲ್ಲಿ, ಸುಖ-ಸಂತೋಷಗಳಲ್ಲಿ ದೇಹದ ನೆಳಲೋ ಎಂಬಂತೆ ಆತನನ್ನು ಅನುಸರಿಸಿಕೊಂಡಿದ್ದು ಸೇವೆಮಾಡಿದನು. ಶ್ರೀರಾಮನ ಸೇವೆಯಲ್ಲಿ ಆತನಿಗೆ ಆಯಾಸವೆಂಬುದಿಲ್ಲ, ಕಷ್ಟಸುಖಗಳ ಗೊಡವೆಯಿಲ್ಲ, ನಿದ್ರಾಹಾರಗಳ ಯೋಚನೆಯಿಲ್ಲ. ಸೇವಾಮಗ್ನನಾಗಿದ್ದ ಆ ಮಹಾನುಭಾವನು ತನಗೊಂದು ದೇಹವಿತ್ತೆಂದಾದರೂ ಯೋಚಿಸಿದ್ದನೋ ಇಲ್ಲವೋ ತಿಳಿಯಲು ಶಕ್ಯವಿಲ್ಲ.

ಸೌಮಿತ್ರಿಯ ಚರಿತ್ರೆಯು ಶ್ರೀಮದ್ರಾಮಾಯಣದಲ್ಲಿ ಪ್ರತ್ಯೇಕವಾಗಿ ಹೇಳಲ್ಪಟ್ಟಿಲ್ಲ. ಶ್ರೀರಾಮನ ಚರಿತ್ರೆಯೊಂದಿಗೆ ಹೆಣೆದುಕೊಂಡಿರುವ ಈತನ ಚರಿತ್ರೆಯನ್ನು ಅದರಿಂದ ಸಂಗ್ರಹಿಸಬೇಕಾಗಿದೆ.

ಸೌಮಿತ್ರಿಯ ಚರಿತ್ರೆಯೊಂದಿಗೆ, ಇನ್ನಿಬ್ಬರು ಸ್ತ್ರೀಶಿರೋಮಣಿಯರ ಅಗಾಧ ಸ್ವಾರ್ಥತ್ಯಾಗದ ಉಲ್ಲೇಖವಾಗತಕ್ಕದು ಆವಶ್ಯಕವಿದೆ. ಆತನ ತಾಯಿಯಾದ ಸುಮಿತ್ರಾದೇವಿ ಮತ್ತು ಆತನ ಪತ್ನಿ ಊರ್ಮಿಳಾದೇವಿ. ಕೈಕೇಯಿಯು ಶ್ರೀರಾಮನನ್ನು ಕಾನನಕ್ಕೆ ಕಳುಹಿಸಿದಾಗ, ಈ ಇಬ್ಬರು ಸಾಧ್ವೀಮಣಿಯರೂ, ದೈವಪ್ರೇರಿತರಾಗಿಯೋ ಎಂಬಂತೆ ಆತನ ಸೇವೆಗೆಂದು ತಮ್ಮ ಪುತ್ರನಾದ ಮತ್ತು ಪತಿಯಾದ ಲಕ್ಷ್ಮಣನನ್ನು ಆತನ ಸೇವೆಗೆಂದೇ ಕಳುಹಿಸಿದರು. ಲಕ್ಷ್ಮಣನು ತಾನೇ ಇಚ್ಛಿಸಿ ಹೊರಟನು ನಿಜ! ಆದರೆ, ಈ ಸಾಧ್ವಿಯರೂ, ಆತನ ಆ ಕಾರ್ಯಕ್ಕೆ ಮನಃಪೂರ್ವಕ ಅನುಮೋದಿಸಿ, ಹದಿನಾಲ್ಕು ವರ್ಷಕಾಲ ಆತನ ಅಗಲಿಕೆಯಿಂದ ಜೀವಧಾರಣೆಮಾಡಿಕೊಂಡಿರಲು ಸಂಕಲ್ಪಿಸಿದುದು ಅವರ ನಿಸ್ವಾರ್ಥ ಮನೋವೃತ್ತಿಯ,—ಮತ್ತು ತ್ಯಾಗದ ಪರಮಾವಧಿಯ ಪ್ರಮಾಣವನ್ನು ಸ್ಪಷ್ಟೀಕರಿಸುತ್ತದೆ. ಇವರ ಸ್ವಾರ್ಥತ್ಯಾಗದೆದುರಿಗೆ,-ಅದರ ಸರಿಯಾದ ಬೆಲೆಯನ್ನು ಗಮನಿಸುವುದಾದಲ್ಲಿ, ಶ್ರೀರಾಮನ ಮಾತೆಯಾದ ಕೌಸಲ್ಯಾದೇವಿಯ ಮತ್ತು ರಾಣಿಯಾದ ಸೀತಾದೇವಿಯ ಸ್ವಾರ್ಥತ್ಯಾಗವೆಂಬುದು ಅಷ್ಟೇನೂ ಮಹತ್ವದ್ದೆನ್ನಿಸುವುದಿಲ್ಲ. ಏಕೆಂದರೆ ಅವರಿಬ್ಬರೂ ಒಂದು ಬಗೆಯಿಂದ ನಿರ್ಬಂಧಕ್ಕೊಳಪಟ್ಟು ಆ ಬಗೆಯ ಕಷ್ಟಪಡಬೇಕಾದುದು ಸಹಜವಿತ್ತು. ಆದರೆ ಸುಮಿತ್ರೆ ಮತ್ತು ಊರ್ಮಿಳೆಯರಿಗೆ ಅಂತಹ ನಿರ್ಬಂಧವೇನೂ ಇರಲಿಲ್ಲ. ಸೌಮಿತ್ರಿಯು ವನಕ್ಕೆ ಹೋಗಬೇಕೆಂದು ಕೈಕೇಯಿಯಾಗಲೀ, ದಶರಥನಾಗಲಿ ನಿರ್ಬಂಧಿಸಿರಲಿಲ್ಲ. ಲಕ್ಷ್ಮಣನ ಆ ಕಾರ್ಯವು ಆತ್ಮಸಂತೋಷಪ್ರೇರಿತವಾದುದು. ಆತನು ಕೈಕೊಂಡ ಆ ಕಾರ್ಯದಲ್ಲಿ ಮನಃಪೂರ್ವಕವಾಗಿ ಸಹಕರಿಸಿದುದು, ಆ ಈರ್ವರು ಸ್ತ್ರೀಶಿರೋಮಣಿಯರ ಘನತೆಯನ್ನೂ ಪವಿತ್ರ ಮನಸ್ಥಿತಿಯನ್ನೂ ಚೆನ್ನಾಗಿ ಪ್ರದರ್ಶಿಸುತ್ತದೆ.

ಕಾಲಕರ್ಮಪರಿಸ್ಥಿತಿಯಿಂದ ಭಾರತೀಯರು ತಮ್ಮ ದೇಶಕ್ಕೂ ಧರ್ಮಕ್ಕೂ ಸಹಜವಾದ ಪವಿತ್ರ ಧ್ಯೇಯಗಳನ್ನು ಮರೆತು ದಾಸ್ಯಮನೋ

ವೃತ್ತಿಗೊಳಗಾಗಿ ಕೆಡುತ್ತಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ಅವರನ್ನು ಎಚ್ಚರಗೊಳಿಸಿ ಅವರಲ್ಲಿ ಕರ್ತವ್ಯ ಜಾಗೃತಿಯನ್ನುಂಟುಮಾಡಲು, ಹಿಂದಿನವರ ಜೀವಿತಗಳಿಗೆ ಮುಖ್ಯಾಧಾರಭೂತಗಳಾಗಿದ್ದ ಅಮೌಲ್ಯ ಧ್ಯೇಯಗಳನ್ನು ಅವರ ಕಣ್ಮನಗಳೆದುರಿಗೆ ತರುವುದಕ್ಕಿಂತಲೂ ಬೇರೆಯಾದ ಆವಶ್ಯಕ ಕಾರ್ಯವು ಮತ್ತೊಂದಿಲ್ಲ. ಆದುದರಿಂದ **ಸುಬೋಧ ಕುಸುಮಾಂಜಲಿ ಗ್ರಂಥಮಾಲೆ**ಯು ತನ್ನ ಜನ್ಮಧ್ಯೇಯವನ್ನನುಸರಿಸಿ, ಮಹನೀಯರ ಜೀವನ ಚರಿತ್ರೆಗಳ ದ್ವಾರಾ, ಆ ಪವಿತ್ರ ಧ್ಯೇಯಗಳನ್ನು ಕನ್ನಡಿಗರೆದುರಿಗೆ ವಿಸ್ತರಿಸಲು ಪ್ರಯತ್ನಿಸಿದೆ. ಭಾಷಾಭಿಮಾನ-ದೇಶಾಭಿಮಾನ ತತ್ಪರರಾದ ಮಹನೀಯರು, ಅದಕ್ಕೆ ಸ್ವಹಸ್ತ ಪರಹಸ್ತ ಯೋಗ್ಯರೀತಿಯಿಂದ ಬೆಂಬಲಕೊಟ್ಟು, ಅದು ಕೈಕೊಂಡಿರುವ ಈ ಕಾರ್ಯವನ್ನು ಸಾಂಗವಾಗಿ ನೆರವೇರಿಸಿದ ಶ್ರೇಯಸ್ಸಿಗೆ ಭಾಗಿಗಳಾಗಬೇಕೆಂದು ಪ್ರಾರ್ಥಿಸುತ್ತೇವೆ.

ಬೆಂಗಳೂರು,
ತಾ. ೪—೭—೧೯೩೫.

ಇತಿ ಸುಜನವಿಧೇಯ,



'ಸೃಷ್ಟಸ್ತ್ವಂ ವನವಾಸಾಯ । ಸ್ವನುರಕ್ತಸ್ಸುಹೃಜ್ಜನೇ ॥'

"ವತ್ಸಾ ಲಕ್ಷ್ಮಣಾ, (ಕಾಡಿನಲ್ಲಿ) ಅಗ್ರಜನಾದ ರಾಮನನ್ನು ಅನುವರ್ತಿಸಿಕೊಂಡಿರುವುದಕ್ಕಾಗಿಯೇ ನೀನು ದೈವದಿಂದ ಸೃಷ್ಟಿಸಲ್ಪಟ್ಟಿರುತ್ತೀಯೆ!"

'ರಾಮಂ ದಶರಥಂವಿದ್ಧಿ ಮಾಂ ವಿದ್ಧಿ ಜನಕಾತ್ಮಜಾಂ ।
ಅಯೋಧ್ಯಾಮಟವೀಂ ವಿದ್ಧಿ ಗಚ್ಛ ತಾತ ಯಥಾಸುಖಂ ॥'

"ಮಗೂ ಲಕ್ಷ್ಮಣಾ, ನೀನು ರಾಮನನ್ನೇ ತಂದೆಯಾದ ದಶರಥನನ್ನಾಗಿ ಭಾವಿಸು, ಸೀತೆಯನ್ನೇ ನಾನೆಂದು ಭಾವಿಸು, ನೀನು ಹೋಗತಕ್ಕ ಕಾಡನ್ನೇ ರಾಜಧಾನಿಯಾದ ಅಯೋಧ್ಯೆಯನ್ನಾಗಿ ಭಾವಿಸು, ಸುಖವಾಗಿ ಹೋಗಿ ಬಾ".

**'ಸುಮಿತ್ರಾ ದೇವಿ'**

---

'ನಾಹಂ ಜಾನಾಮಿ ಕೇಯೂರೇ ನಾಹಂ ಜಾನಾಮಿ ಕುಂಡಲೇ ।
ನೂಪುರೇತ್ವಭಿ ಜಾನಾಮಿ ನಿತ್ಯಂ ಪಾದಾಭಿವಂದನಾತ್ ॥'

"ಸ್ವಾಮೀ, ರಾಮಚಂದ್ರಾ, ನನಗೆ (ಸೀತೆಯ) ಕೇಯೂರದ ಪರಿಚಯವಿಲ್ಲ. ಆಕೆಯ ಕರ್ಣಾಭರಣವಾದ ಕುಂಡಲದ ಪರಿಚಯವೂ ನನಗಿಲ್ಲ. ಆದರೆ ನಿತ್ಯವೂ ಆಕೆಗೆ ಪಾದಾಭಿವಾದನ ಮಾಡುತ್ತಿದ್ದಾಗ ನೋಡುತ್ತಿದ್ದ ಪಾದಾಭರಣವಾದ ನೂಪುರದ ಪರಿಚಯವು ಮಾತ್ರ ನನಗುಂಟು".

'ನಹಿ ತಾತಂ ನಶತ್ರುಘ್ನಂ ನಸುಮಿತ್ರಾಂ ಪರಂತಪ
ದ್ರಷ್ಟುಮಿಚ್ಛೇಯ ಮದ್ಯಾಹಂ ಸ್ವರ್ಗಂಚಾಪಿ ತ್ವಯಾ ವಿನಾ ॥'

"-ಹೇ ಶತ್ರುನಾಶನಾ, ನಿನ್ನನ್ನು ಬಿಟ್ಟು ನನಗೆ ತಂದೆಯಾದ ದಶರಥನನ್ನಾಗಲೀ, ತಮ್ಮನಾದ ಶತ್ರುಘ್ನನನ್ನಾಗಲೀ, ಕೊನೆಗೆ ನನ್ನ ತಾಯಿಯಾದ ಸುಮಿತ್ರಾದೇವಿಯನ್ನಾಗಲೀ ನೋಡಲಿಚ್ಛೆಯಿಲ್ಲ. ಹೆಚ್ಚೇನು, ನನಗೆ ನಿನ್ನನ್ನು ಬಿಟ್ಟು ಸ್ವರ್ಗವೂ ಬೇರೆಯಿಲ್ಲ".

**'ಲಕ್ಷ್ಮಣ'**



ಸೀತಾ ವನವಾಸ—ದುಃಖೀ ಸೌಮಿತ್ರಿ.

|| ಶ್ರೀರಾಮ ಸಹಾಯಂ ||

## ಶ್ರೀರಾಮಸೇವಾ ನಿರತನಾದ

# ಸೌಮಿತ್ರಿ

ಅಧ್ಯಾಯ ೧ 'ಜನನ - ಬಾಲ್ಯ'

**ಪರಮಪಾವನೆ,** ನಮ್ಮ ಮಾತೃಭೂಮಿ, ಈ ಭಾರತ ದೇಶದಲ್ಲಿ, ಮಾನವ ಜನ್ಮದ ಸಾರ್ಥಕತೆಗೆ ಆವಶ್ಯಕವೆನ್ನಿಸುವ ಸಕಲ ಸದ್ಗುಣಗಳನ್ನೂ ಪರಮಾವಧಿ ಪ್ರಮಾಣದಿಂದ ಆಚರಣೆಯಲ್ಲಿ ತಂದು ಅಭ್ಯಾಸದಲ್ಲಿಟ್ಟುಕೊಂಡು ಅವುಗಳನ್ನು ತಮ್ಮ ಸಂತಾನರಿಗೆ ಆದರ್ಶವಾಗಿ ಬಿಟ್ಟುಹೋಗಿರುವ ನರೋತ್ತಮರು ಇತರ ಯಾವ ದೇಶಕ್ಕಿಂತಲೂ ವಿಶೇಷವಾಗಿ ದೊರೆಯುವರು ಮನುಷ್ಯನಲ್ಲಿ ಸದ್ಗುಣ ಸನ್ನಡತೆಗಳು, ನೆಲೆಸಿ, ಬೆಳೆದು ಅಭಿವೃದ್ಧಿಗೊಂಡು, ಅವು ಅತನ ಜನ್ಮಸಾರ್ಥಕತೆಗೆ ಪ್ರಯೋಜಕವಾಗಬೇಕೆಂದಲ್ಲಿ ಮೊದಲು ಅವನಲ್ಲಿ ಕಂಡುಬರಬೇಕಾದ ಯೋಗ್ಯತೆಯೆಂದರೆ ವಿನಯ-ವಿಧೇಯತೆಗಳು. ಈ ವಿನಯ ವಿಧೇಯತೆಗಳು ಯಾವನಲ್ಲಿಲ್ಲವೋ ಅವನು, ಯಾರಿಗೂ ಅಣಗಿ ಮಣಗಿ ನಡೆಯದೆ, ಯಾರ ಮಾತನ್ನೂ ಲಕ್ಷ್ಯಮಾಡದೆ, ಯಾರ ಸಲಹೆ - ಸವಿನುಡಿಗಳಿಗೂ ಕಿವಿಗೊಡದವನಾಗಿ ಧೂರ್ತನೆನ್ನಿಸಿಕೊಳ್ಳಲ್ಪಡುವನು. ಅವನ ಮನಸ್ಸು ಸಮಾಧಾನ ಸ್ಥಿತಿಯಲ್ಲಿದ್ದು ಯುಕ್ತಾಯುಕ್ತಗಳನ್ನು ಕುರಿತು ವಿಚಾರ ನಡೆಯಿಸಲು ಅಶಕ್ತವಾಗುವುದು. ಕಾಲಕ್ರಮದಲ್ಲಿ-ತಾನೇ ಎಲ್ಲವನ್ನೂ ತಿಳಿದವನು, ತಾನು ಯಾರ ಅಂಕೆಗೆ ಒಳಪಟ್ಟು ನಡೆಯಬೇಕಾದ ಕಾರಣವೇನಿದೆ, ಎಂಬ ಮುಂತಾದ ಭಾವನೆಗಳೂ ಮನಸ್ಸಿನಲ್ಲಿ ನೆಲೆಸಿ, ಅವನು ದುರಭಿಮಾನಿಯೂ ದುರಾಗ್ರಹಿಯೂ ಆಗಿ ಪರಿಣಮಿಸುವನು. ಆದುದರಿಂದ ಮನುಷ್ಯನು ಚಿಕ್ಕಂದಿನಲ್ಲಿ ಹಿರಿಯರಿಗೂ ಗುರುಜನರಿಗೂ ವಿಧೇಯನಾಗಿ, ಮಾತುಕಥೆಗಳಲ್ಲಿ ವಿನಯವುಳ್ಳವನಾಗಿ ನಡೆಯುವಿಕೆಯನ್ನು ಅಭ್ಯಾಸಮಾಡುವುದು ಅತ್ಯಾವಶ್ಯಕವಾಗಿರುವುದು.

ಈ ವಿನಯ ವಿಧೇಯತೆಗಳು, ಮನುಷ್ಯರಲ್ಲೇ ತನ್ನ ಗುರುಹಿರಿಯ ರಿಂದ ಪ್ರಾರಂಭಿಸಿದಲ್ಲಿ ಪರಿಣಾಮದಲ್ಲಿ ಪರಮೇಶ್ವರನ ಭಕ್ತಿಯಲ್ಲಿ ಕೊನೆ ಗೊಳ್ಳಲೂ ಸಾಧ್ಯವಿರುವುದು. ಪ್ರತ್ಯಕ್ಷರಾಗಿರುವ ತನ್ನ ತಾಯಿತಂದೆಗಳಿಗೇ, ಗುರುಹಿರಿಯರಿಗೇ, ತಲೆಬಾಗಲು ಕಲಿಯದವನು - ಸಮ್ಮತಿಸದವನು ಅದೃಶ್ಯ ನಾಗಿರುವ ದೇವರಿಗೆ ನಮಸ್ಕರಿಸಬೇಕೆಂಬುದನ್ನು ಒಪ್ಪುವುದೂ ಕಷ್ಟಸಾಧ್ಯ ವಿದೆ. ಆದುದರಿಂದ ಪರೋಕ್ಷನಾಗಿರುವ ದೇವದೇವನಲ್ಲಿ ವಿಧೇಯಬುದ್ಧಿ ಯಿಂದ ನಡೆಯಬೇಕಾದ ಪಾಠವನ್ನು ಮನುಷ್ಯರು ಪ್ರತ್ಯಕ್ಷ ದೈವಗಳಂತಿ ರುವ ತಾಯಿತಂದೆಗಳಿಗೆ ವಿಧೇಯರಾಗಿರುವುದರ ಮೂಲಕವೇ ಕಲಿಯಬೇ ಕಾಗಿದೆ.

'ಬಾಲ್ಯದಿಂದಲೂ ಬಾಲಕ ಬಾಲಿಕೆಯರಲ್ಲಿ ಈ ವಿನಯವಿಧೇಯತೆಗಳ ನಿರ್ಬಂಧವನ್ನಿಟ್ಟು ಅವರನ್ನು ಒಂದು ಬಂಧಕಕ್ಕೆ ಒಳಪಟ್ಟವರಂತೆ ಬೆಳೆಯ ಗೊಡಿಸಿದಲ್ಲಿ ಮುಂದೆ ಅವರು, ತಮ್ಮ ಸ್ವಾಭಾವಿಕ ಮನಸ್ಥಿತಿಯನ್ನೇ ಕೆಡೆಸಿ ಕೊಂಡು, ಸದಾ ಬೇರೊಬ್ಬರ ಆಜ್ಞೆಗೆ ಒಳಪಟ್ಟು ನಡೆವ ಚಿತ್ತವೃತ್ತಿ ಯುಳ್ಳವರಾಗುವರು ; ಅವರಲ್ಲಿ ವ್ಯಕ್ತಿತ್ವವೇ (Individuality) ನಾಶ ವಾಗಿ ಹೋಗುವುದು. ಅವರು ದಾಸ್ಯಮನೋಭಾವವುಳ್ಳವರಾಗಿಯೇ (Slavish mentality) ಬೆಳೆಯುವರಾದುದರಿಂದ ಮುಂದೆ ಅವರಿಂದ ಯಾವ ಘನಕಾರ್ಯವೂ ನಡೆಯಲು ಅವಕಾಶವಾಗದು. ಅವರು ಸದಾ, ಪರಕೀಯರ ಸೂತ್ರದ ಬೊಂಬೆಗಳಂತಾಗಿ ವ್ಯರ್ಥಜೀವಿಗಳಾಗುವರು' ಎಂಬ ಒಂದು ಭಾವನೆಯು ಈಚೆಗೆ ಹಬ್ಬತೊಡಗಿದೆ. - 'ಇಂತಹ ಕಾರ್ಯವನ್ನೇ ಮಾಡು, ಈ ಕಾರ್ಯವನ್ನು ಮಾಡಬೇಡ' ಎಂಬ ಮುಂತಾದ ಆಜ್ಞೆಗಳಿಗೆ ಮಕ್ಕಳನ್ನು ಒಳಪಡಿಸಿ ಆ ಬಗೆಯ ವಿಧೇಯತೆಗೆ ಅವರು ಅಡಿಯಾಳುಗಳಾಗಿ ನಡೆವಂತೆ ನಿರ್ಬಂಧಿಸಿ ಬೆಳೆಯಿಸಿದಲ್ಲಿ, ಹಾಗೆ ಬೆಳೆದವರು ಧೈರ್ಯಸಾಹಸಾದಿ ಗಳನ್ನು ನೀಗಿಕೊಂಡು ಹೇಡಿಗಳೂ, ದುರ್ಬಲರೂ ಆಗುವರು ಎಂದು ಈಚೆಗೆ ಕೆಲಮಂದಿ ಮಹನೀಯರು ಪ್ರತಿಪಾದಿಸುತ್ತಿರುವರು. ಮನುಷ್ಯನಿಗೆ ದಾಸ್ಯ ಮನೋಭಾವವಿರುವುದು ತಪ್ಪು - ಆತನು ಸ್ವತಂತ್ರಮನೋಭಾವವುಳ್ಳವ ನಾಗಿದ್ದು, ತನ್ನ ಮನಸ್ಸಾಕ್ಷಿಗೆ ವಿರೋಧವಿಲ್ಲದಂತೆ ನಡೆವ ಚಿತ್ತವೃತ್ತಿ ಯುಳ್ಳವನಾಗಿರಬೇಕು ಎಂಬುದನ್ನು ಸಕಲರೂ ಒಪ್ಪಬೇಕಾಗಿದೆ. ಈ

ಕಾರಣದಿಂದ, ಅವನು ಯುಕ್ತಾಯುಕ್ತ ವಿಚಾರವನ್ನು ನೀಗಿ ಸಕಲ ಕಾರ್ಯ ಗಳನ್ನೂ ತನ್ನ ಮನಬಂದಂತೆ ಮಾಡುವ ಸ್ವಾತಂತ್ರ್ಯವನ್ನು ಪಡೆದಿರಬೇ ಕೆಂದರೆ ಅದು ಮಾತ್ರ ತಪ್ಪುಮಾರ್ಗವೆನ್ನಬೇಕಾಗುವುದು. ಏಕೆಂದರೆ ಯುಕ್ತಾಯುಕ್ತ ವಿವೇಚನೆಯುಳ್ಳ ಮನುಷ್ಯನು ಒಂದಾನೊಂದು ಕಾರ್ಯವು ಯುಕ್ತವಾದುದೆಂದೂ ನ್ಯಾಯಸಮ್ಮತವಾದುದೆಂದೂ ತಿಳಿದಿದ್ದರೂ, ಹೊನ್ನು ಮಣ್ಣು ಹೆಣ್ಣು ಮುಂತಾದುವುಗಳ ಆಕರ್ಷಣೆಗೂ, ದಾಕ್ಷಿಣ್ಯಕ್ಕೂ ಒಳಗಾಗಿ ಸರಿಯಾದುದನ್ನು ತಪ್ಪೆಂದೂ, ತಪ್ಪಾದುದನ್ನು ಸರಿಯೆಂದೂ ಹೇಳುವವ ನಾದರೆ ಅದನ್ನು ದಾಸ್ಯಮನೋಭಾವವೆನ್ನಬೇಕಲ್ಲದೆ, ಯುಕ್ತಾಯುಕ್ತ ಪರಿ ಜ್ಞಾನವೇ ಇಲ್ಲದ ಮಗುವು ಮಾಡುವ ಒಂದು ಕಾರ್ಯವನ್ನು ಆ ಹೆಸರಿನಿಂದ ಕರೆಯಲಾಗದು. ಶಿಕ್ಷೆಯ ಭಯಕ್ಕಾಗಲೀ, ಲಾಭದ ಆಸೆಯಿಂದಲಾಗಲೀ, ಮನಸ್ಸಾಕ್ಷಿಗೆ ವಿರೋಧವಾಗಿ ನಡೆಯದಂತೆ ಬೋಧಿಸಿ ಯುಕ್ತಾಯುಕ್ತಗಳ ನ್ನು ತಿಳುಹಿಸಿ ಕೊಡತಕ್ಕ ಕಾರ್ಯವಾದರೂ ಬಾಲ್ಯದಲ್ಲೇ ನಡೆಯಬೇಕಾ ಗಿದೆ. ಹಿರಿಯರೂ, ತಂದೆತಾಯಿಗಳೂ, ಜ್ಞಾನಿಗಳೂ ಹೇಳಿದ ಮಾತನ್ನು ವಿನಯದಿಂದ ಕೇಳುವ - ಮತ್ತು ಹಾಗೆ ಕೇಳಿದ ಆ ಮಾತಿಗೆ ಅನುಸಾರವಾಗಿ ವಿಧೇಯತೆಯಿಂದ ನಡೆವ, ಸಾಧುಸ್ವಭಾವವು ಮನುಷ್ಯನಲ್ಲಿ ಏರ್ಪಡದಿದ್ದಲ್ಲಿ, ಆತನು ಉತ್ತಮ ನಾಗರಿಕನೆನಿಸಿಕೊಂಡು ಲೋಕದಲ್ಲಿ ಜೀವಿಸುವುದು ಸುಲಭವಲ್ಲ. - ಇಂತಹ ವಿನಯ ಮತ್ತು ವಿಧೇಯತೆಗಳು ಅವನಲ್ಲಿ ಏರ್ಪಡ ದಿದ್ದಲ್ಲಿ ಅವನು ತನ್ನ ಮಾತಾಪಿತೃಗಳಿಗಾಗಲೀ, ಗುರುಹಿರಿಯರಿಗಾಗಲೀ, ಲೋಕಕ್ಕಾಗಲೀ, ತನ್ನ ಸೇವೆಯನ್ನು ಸಲ್ಲಿಸಲಿಕ್ಕಾದರೂ ಹೇಗೆ ಸಾಧ್ಯ ವಿದ್ದೀತು! ಸ್ವಯಂ ಧೂರ್ತನಾದ ಆ ಮನುಷ್ಯನನ್ನು ಯಾರು ಪ್ರೇಮ ದಿಂದ ಸಮಿಾಪಿಸಲು ಸಾಧ್ಯವಿದ್ದೀತು. ಆದುದರಿಂದ ಮನುಷ್ಯನು ತನ್ನ ಕುಟುಂಬಕ್ಕಾಗಲೀ, ತನ್ನ ಜನಾಂಗಕ್ಕಾಗಲಿ, ದೇಶಕ್ಕಾಗಲೀ, ಉಪಕಾರಿ ವ್ಯಕ್ತಿಯಾಗಬೇಕೆಂದಲ್ಲಿ ಅವನಲ್ಲಿ ಮೇಲ್ಕಂಡ ಗುಣಗಳು ಯುಕ್ತಪ್ರಮಾಣ ದಲ್ಲಿ ನೆಲೆಸಿದ್ದರಲ್ಲದೆ ಏನೂ ಉಪಯೋಗವಾಗದು. ನಮ್ಮ ಕಥಾನಾಯ ಕನು ಬಾಲ್ಯದಲ್ಲಿ ತನ್ನ ಅಣ್ಣನಾದ ಶ್ರೀರಾಮನಿಗೆ ವಿಧೇಯನಾಗಿದ್ದು, ಆತ ನನ್ನೇ ತನ್ನ ಸರ್ವಸ್ವವೂ ಎಂದು ತಿಳಿದು ಸೇವೆಮಾಡಿಕೊಂಡಿದ್ದರೂ, ಯಾವಾ ಗಲೂ ಹೇಡಿತನ ಕ್ಷುದ್ರತನಗಳನ್ನು ಪ್ರದರ್ಶಿಸದೆ, ತನ್ನ ಮನಸ್ಸಾಕ್ಷಿಯನ್ನು

ಆ ವಿಧೇಯತೆಗೆ ಮಾರಿಕೊಳ್ಳದೆ, ಶ್ರೀರಾಮನ ಆಜ್ಞೆಯು ತನ್ನ ಮನಸ್ಸಾಕ್ಷಿಗೆ ವಿರೋಧವೆಂದು ತೋರಿಬಂದಾಗಲೆಲ್ಲ, ಅದು ತಪ್ಪೆಂದು ನಿರ್ದಾಕ್ಷಿಣ್ಯವಾಗಿ ವಿಜ್ಞಾಪಿಸಿ, ಕೊನೆಗೆ ಅದು ರಾಜಾಜ್ಞೆಯಂತಾದಾಗ ಮಾತ್ರ ವಿಧಿಯಿಲ್ಲದೆ ಅದರಂತೆ ಆಚರಿಸಿದ ಉದಾಹರಣೆಗಳು ಆ ಮಹಾನುಭಾವನ ಚರಿತ್ರೆಯಲ್ಲಿ, ಅಲ್ಲಲ್ಲಿ ಕಂಡುಬರುತ್ತವೆ. ಭ್ರಾತೃಪ್ರೇಮ, ನಿಸ್ವಾರ್ಥಸೇವೆ ಮುಂತಾದ ಸದ್ಗುಣಗಳಿಗೆ ಆದರ್ಶಮೂರ್ತಿಯಂತಿರುವ ಈ ಮಹನೀಯನ ಜೀವಿತವು ನಮ್ಮ ಕರ್ಣಾಟಕ ಬಾಲಕ ಬಾಲಿಕೆಯರಿಂದ ಓದಲೂ - ಅನುಕರಿಸಲ್ಪಡಲೂ ಅರ್ಹವಾದುದು. ಆದುದರಿಂದ ಅದನ್ನಿಲ್ಲಿ ಕೊಡಬಯಸುತ್ತೇವೆ.

ಸೂರ್ಯವಂಶದ ರಾಜಶ್ರೇಷ್ಠನಾದ ದಶರಥನು ಅಯೋಧ್ಯಾನಗರಿಯಲ್ಲಿ ಧರ್ಮದಿಂದ ರಾಜ್ಯಭಾರಮಾಡುತ್ತಿದ್ದನು. ಆತನಿಗೆ ಮೂರುಮಂದಿ ಹೆಂಡಿರು. ಪಟ್ಟಮಹಿಷಿಯು ಕೌಸಲ್ಯಾದೇವಿ. ಕೌಸಲ್ಯೆಯ ತರುವಾಯ ದಶರಥನು ಸುಮಿತ್ರೆಯೆಂಬ ಕನ್ಯಾಮಣಿಯನ್ನು ಭಾರ್ಯೆಯನ್ನಾಗಿ ಸ್ವೀಕರಿಸಿದನು. ಸುಮಿತ್ರೆಯೆಂದರೆ - ಆ ಹೆಸರು ಆಕೆಗೆ ಅನ್ವರ್ಥವಾಗಿರುವುದು. ಆಕೆಯು ಪತಿವ್ರತಾ ಧರ್ಮನಿರತಳಾಗಿ, ಸದಾ ಸತ್ಕಾರ್ಯಗಳಲ್ಲೇ ತನ್ನ ಕಾಲವನ್ನು ಕಳೆಯುತ್ತ, ಸಕಲರಲ್ಲೂ ಸ್ನೇಹಪ್ರೇಮಗಳನ್ನುಂಟಾಗಿ, ಎಲ್ಲರ ಗೌರವಾದರಗಳಿಗೂ ಪಾತ್ರಳೆನ್ನಿಸಿಕೊಂಡಿದ್ದಳು. ತನಗಿಂತಲೂ ಹಿರಿಯ ರಾಣಿಯಾದ ಕೌಸಲ್ಯೆಯಲ್ಲಿ ಸುಮಿತ್ರೆಯು ವಿಶೇಷ ಭಕ್ತಿಗೌರವಗಳನ್ನುಂಟಾಗಿ ಆಕೆಯ ಮನಸ್ಸಿಗೆ ಸಮ್ಮತವಾದ ಮಾರ್ಗದಲ್ಲಿ ನಡೆಯುತ್ತಲಿದ್ದಳು. ಈ ಇಬ್ಬರಲ್ಲದೆ, ದಶರಥನಿಗೆ ಕೈಕೇಯಿಯೆಂಬ ಮತ್ತೊಬ್ಬ ರಾಣಿಯೂ ಇದ್ದಳು. ಅವಳಿಗೆ ತಾನು ರೂಪವತಿಯೆಂಬ ಅಹಂಕಾರವು ಲೇಶ ಮಾತ್ರ ವಿದ್ದಿತು. ಅಲ್ಲದೆ ರಾಜನೂ ಕಿರಿಯ ಹೆಂಡತಿಯೆಂದು ಅವಳಲ್ಲಿ ಹೆಚ್ಚು ಮಮತೆಯನ್ನು ವ್ಯಕ್ತಪಡಿಸುತ್ತಿದ್ದನು. ಆದರೆ ಕೌಸಲ್ಯಾಸುಮಿತ್ರೆಯರು ಆ ಕಾರಣಕ್ಕಾಗಿ ರಾಜನಲ್ಲಿ ಅವಿಶ್ವಾಸಕ್ಕೆ ಅವಕಾಶಕೊಡದೆ, ತಮ್ಮ ಪತಿಭಕ್ತಿಗೆ ಕುಂದು ತಂದುಕೊಳ್ಳದೆ, ಎಂದಿನಂತೆ ಪತಿಸೇವಾ ತತ್ಪರರಾಗಿ, ಕೈಕೇಯಿಯನ್ನೂ ತಮ್ಮಲ್ಲೊಬ್ಬಳನ್ನಾಗಿಯೇ ಪ್ರೀತಿ ಆದರಗಳಿಂದ ಕಾಣುತ್ತ ಕುಟುಂಬಯಾತ್ರೆಯನ್ನು ಸಾಗಿಸುತ್ತಿದ್ದರು.

ದಶರಥನಿಗೆ ತನ್ನಾ ಮೂರುಮಂದಿ ಪತ್ನಿಯರಲ್ಲೂ ಬಹುಕಾಲಗಳ ವರೆಗೆ ಮಕ್ಕಳಾಗದಿರಲು ಆತನ ಚಿಂತೆಯು ಮಿತಿಮೀರಿತು. ಶ್ರೇಷ್ಠವಾದ ಇಕ್ಷ್ವಾಕುಕುಲವು ತನ್ನವರೆಗೆ ಅವಿಚ್ಛಿನ್ನವಾಗಿ ನಡೆದುಬಂದು, ದುರ್ದೈವಿಯಾದ ತನ್ನಲ್ಲಿ ಅದು ನಿಂತುಹೋಗುವಂತಾಯಿತಲ್ಲ ಎಂದು ಅಗಾಧವಾದ ವ್ಯಥೆಯಿಂದ, ತನ್ನ ಕುಲಗುರುಗಳಾದ ವಸಿಷ್ಠಮಹರ್ಷಿಗಳಲ್ಲಿ ವಿಜ್ಞಾಪಿಸಿಕೊಂಡನು. ಅವರು, ಮಹರ್ಷಿಶ್ರೇಷ್ಠರಾದ ಋಷ್ಯಶೃಂಗರನ್ನು ಕರೆಯಿಸಿಕೊಂಡು, ಅವರ ಸಾನ್ನಿಧ್ಯದಲ್ಲಿ ಪುತ್ರಕಾಮೇಷ್ಟಿ ಯಾಗಮಾಡಿದಲ್ಲಿ ಲೋಕೋತ್ತರ ಪುತ್ರಸಂತಾನವುಂಟಾಗುವುದೆಂದು ಭರವಸೆಕೊಟ್ಟರು. ಒಡನೆ ದಶರಥನು, ಋಷ್ಯಶೃಂಗ ಮುನೀಶ್ವರರನ್ನು ಕರೆತರಲು ಆಪ್ತರನ್ನು ಕಳುಹಿಸಿ, ಯಾಗಕ್ಕೂ ತಕ್ಕ ಸಿದ್ಧತೆಗಳನ್ನೆಲ್ಲ ಮಾಡಿದನು. ಯುಕ್ತಕಾಲದಲ್ಲಿ ಮಹಾನುಭಾವರಾದ ಋಷ್ಯಶೃಂಗರೂ ಬಂದರು. ದೇಶದೇಶದಿಂದ ಭೂಸುರೋತ್ತಮರೂ ರಾಜಾಧಿರಾಜರೂ ಆಗಮಿಸಿ, ಯಾಗಶಾಲೆಯು ತುಂಬಿಹೋಯಿತು. ಮಹಾರಾಜನಿಗೆ ಆಶೀರ್ವದಿಸಲು ಮಹಾಮಹಿಮರಾದ ಅನೇಕಮಂದಿ ಮಹರ್ಷಿಗಳೂ ಆಹ್ವಾನಿತರಾಗಿ ಬಂದು ಯಾಗಶಾಲೆಯ ಒಂದು ಭಾಗದಲ್ಲಿ ಕುಳಿತಿದ್ದರು. ಮಹಾರಾಣಿಯರ ಮಂಗಳಾಕಾಂಕ್ಷಿಗಳಾಗಿ ಬಂದು ಸೇರಿದ ಋಷಿಪತ್ನಿಯರಿಂದಲೂ, ಇತರ ಸುಮಂಗಲೆಯರಿಂದಲೂ ಸಭೆಯ ಒಂದು ಪಾರ್ಶ್ವವು ಅಲಂಕರಿಸಲ್ಪಟ್ಟಿದ್ದಿತು. ಯಾಗವು ವಿಜೃಂಭಣೆಯಿಂದ ನೆರವೇರಿತು. ಸಕಲದೇವತೆಗಳಿಗೂ ಯಜ್ಞಾಹುತಿಯು ಸಲ್ಲಿಸಲ್ಪಟ್ಟಿತು. ಹೋಮಕುಂಡದಿಂದ ಯಜ್ಞಪುರುಷನೇ ರೂಪಗೊಂಡು ಮಂತ್ರಸಿದ್ಧವಾದ ಪಾಯಸಪಾತ್ರೆಯನ್ನು ಹಿಡಿದು ಮೈದೋರಿ ಬಂದು ಅದನ್ನು ದಶರಥ ಸಾರ್ವಭೌಮನ ಹಸ್ತದಲ್ಲಿ ಸಮರ್ಪಿಸಿದನು. ಆತನ ಆದೇಶದಂತೆ ರಾಜನು ಅದನ್ನು ತನ್ನ ಮೂವರು ಪತ್ನಿಯರಿಗೂ ಹಂಚಿ ಕೊಟ್ಟನು. ಈ ಅಪೂರ್ವ ವರಪ್ರದಾನ ರೀತಿಯು ಯಾಗಮಂಟಪದಲ್ಲಿದ್ದ ಸಕಲರನ್ನೂ ಆಶ್ಚರ್ಯ ಮಗ್ನರನ್ನಾಗಿಸಿತು. ಋಷಿಮುನಿಗಳೆಲ್ಲರೂ ಪರಮ ಸಂತುಷ್ಟರಾಗಿ ಸಾಧು ಸಾಧುವೆಂದು ಹೊಗಳಿದರು. ಭೂಸುರೋತ್ತಮರು ಆಶೀರ್ವದಿಸಿದರು. ಸಕಲರೂ ಆನಂದಾಂಬುಧಿಯಲ್ಲಿ ಓಲಾಡಿದರು.

ಲೋಕದಲ್ಲಿ ಶ್ರೀರಾಮರ ಅವತಾರವು ರಾವಣಾದಿ ದುರುಳ ರಾಕ್ಷಸ ಕುಲ ವಧಾಕಾರ್ಯಕ್ಕಾಗಿಯೇ ಆದುದು ಎಂಬುದು ಸುಪ್ರಸಿದ್ಧವಲ್ಲವೆ? ದುಷ್ಟ ರಾಕ್ಷಸರ ಬಾಧೆಯನ್ನು ತಾಳಲಾರದೆ, ಶರಣಾಗತರಾಗಿ ತನ್ನನ್ನು ಪ್ರಾರ್ಥಿಸಿದ ಇಂದ್ರಾದಿ ದೇವತೆಗಳಿಗೂ ಋಷಿಮುನಿಗಳಿಗೂ ಅಭಯಪ್ರದಾನಮಾಡಿದ ಶ್ರೀ ಮಹಾವಿಷ್ಣುವು ದೇವತೆಗಳಿಗೆ ವಾನರ ಭಲ್ಲೂಕಗಳಾಗಿ ಅವತಾರಮಾಡುವಂತೆ ಆಜ್ಞಾಪಿಸಿ, ತಾನು ದಶರಥರಾಜೇಂದ್ರನ ಪತ್ನಿಯರಲ್ಲಿ ಪುತ್ರತ್ವೇನ ಅವತಾರ ಮಾಡಲು ನಿಶ್ಚಯಿಸಿದನು. ತಾನು ಮಾತ್ರವಲ್ಲ-ಕ್ಷೀರಸಮುದ್ರದಲ್ಲಿ ತನಗೆ ಯೋಗನಿದ್ರೆಯಲ್ಲಿ ಶಯ್ಯೆಯಾಗಿ ಸೇವೆಮಾಡುತಲಿದ್ದ ಆದಿಶೇಷನನ್ನೂ. ತನ್ನ ಎಡಬಲ ಕೈಗಳ ಆಯುಧಗಳಾದ ಶಂಖಚಕ್ರಗಳನ್ನೂ ತನ್ನ ತಮ್ಮಂದಿರಾಗಿ ಅವತರಿಸುವಂತೆ ಆಜ್ಞಾಪಿಸಿದನು.

ಇತ್ತ, ಮಂತ್ರಪೂತವಾದ ದಿವ್ಯ ಪಾಯಸವು ಮೂವರು ರಾಜಪತ್ನಿಯರಿಗೂ ಹಂಚಲ್ಪಟ್ಟಿತೆಂದು ಹೇಳಿತಲ್ಲವೆ? ಅದನ್ನು ಭುಜಿಸಿದ ರಾಜಪತ್ನಿಯರು ಯಥಾ ಕಾಲದಲ್ಲಿ ಗರ್ಭಧಾರಣ ಮಾಡಿದರು. ತನ್ನ ಮೂವರು ರಾಣಿಯರೂ ಏಕಕಾಲದಲ್ಲಿ ಗರ್ಭಧಾರಣ ಮಾಡಿದ ಸಂಗತಿಯನ್ನು ತಿಳಿದು ದಶರಥನು ಪರಮಾನಂದಗೊಂಡನು. ತನ್ನ ಬಾಳ್ವೆಯು ಸಾರ್ಥಕವಾಯಿತೆಂದುಕೊಂಡನು. ಆ ಗರ್ಭಿಣೀ ಸ್ತ್ರೀಯರಿಗೆ ಆಯಾ ಕಾಲಕ್ಕೆ ನಡೆಯಬೇಕಾದ ಸೀಮಂತಾದಿ ಸಕಲ ಕಾರ್ಯಗಳನ್ನೂ ಯಥಾವತ್ತಾಗಿ ನಡೆಯಿಸಿದನು. ಅವರ ಸ್ವಾಭಾವಿಕ ಬಯಕೆಗಳನ್ನೆಲ್ಲ ಲೋಪವಿಲ್ಲದೆ ನೆರವೇರಿಸಿದನು. ಪ್ರಕೃತಿನಿಯಮದಂತೆ ಮಹಾರಾಣಿಯರ ಗರ್ಭವು ಒಂಭತ್ತು ತಿಂಗಳಕಾಲ ಸುರಕ್ಷಿತವಾಗಿ ಬೆಳೆದು, ಮುಂದೆ ಚೈತ್ರ ಶುದ್ಧ ನವಮಿ ಶುಭದಿನದಲ್ಲಿ ಸಕಲ ಶುಭ ಗ್ರಹಗಳೂ ಉಚ್ಚಸ್ಥಾನದಲ್ಲಿದ್ದ ಒಂದು ಶುಭ ಮುಹೂರ್ತದಲ್ಲಿ ಪಟ್ಟದರಾಣಿ ಕೌಸಲ್ಯಾದೇವಿಯ ಗರ್ಭಸುಧಾಂಬುಧಿಯಲ್ಲಿ ಒಂದು ಪುತ್ರರತ್ನವು ಉದಯಿಸಿತು ಆ ಕಾಲದಲ್ಲಿ ದಿಕ್ಕುಗಳೆಲ್ಲವೂ ಸುಪ್ರಸನ್ನವಾದುವು. ಸುವಾಸನಾಯುಕ್ತವಾದ ಮಂದಮಾರುತವು ಬೀಸಿತು. ಸಕಲರ ಮನಸ್ಸೂ ಉಲ್ಲಾಸಗೊಂಡಿತು. ಆ ಮಹನೀಯನಿಂದ ಲೋಕದಲ್ಲಿ ದುಷ್ಟಶಿಕ್ಷಣ, ಶಿಷ್ಟರಕ್ಷಣ, ಧರ್ಮಸ್ಥಾಪನಾದಿ ಮಹತ್ಕಾರ್ಯಗಳು ನಡೆದು ಜಗತ್ತಿನಲ್ಲಿ ಶಾಂತಿಯು ನೆಲೆಸಲು ಅವಕಾಶವಾಗುವುದೆಂದು ತಪೋಧನರಾದ ಋಷಿಮುನಿಗಳು ಪರಮಸಂತುಷ್ಟರಾದರು.

ಪಟ್ಟದ ರಾಣಿಯಲ್ಲಿ ಸಂತಾನೋದಯವಾಯಿತೆಂದು ಹರ್ಷಗೊಂಡಿದ್ದ ರಾಜನಿಗೆ ಚಿಕ್ಕರಾಣಿಯಾದ ಕೈಕೇಯಿಯೂ ಒಂದು ಗಂಡು ಮಗುವನ್ನು ಪ್ರಸವಿಸಿದಳೆಂಬ ಶುಭವಾರ್ತೆಯನ್ನು ದಾದಿಯರು ತಿಳಿಸಿ, ಆತನ ಸಂತೋಷವನ್ನು ಹೆಚ್ಚಿಸಿದರು. ತನ್ನ ಮತ್ತೊಬ್ಬ ರಾಣಿ ಸುಮಿತ್ರಾದೇವಿಯು ಇನ್ನೂ ಪ್ರಸವಿಸಲಿಲ್ಲವೆಂದು ರಾಜನು ಯೋಚಿಸುತ್ತಿದ್ದ ವೇಳೆಯಲ್ಲೇ ಆಕೆಯೂ ಅವಳಿ ಮಕ್ಕಳನ್ನು ಹಡೆದಳೆಂಬ ಶುಭವಾರ್ತೆಯು ರಾಜನಿಗೆ ತರಲ್ಪಟ್ಟಿತು. ಸುಮಿತ್ರಾದೇವಿಯು ಯಮಳ ಶಿಶುಗಳನ್ನು ಸುಖವಾಗಿ ಪ್ರಸವಿಸಿ, ಅವರೊಂದಿಗೆ ಪ್ರಸವಗೃಹದಲ್ಲಿ, ಇಂದ್ರೋಪೇಂದ್ರರನ್ನು ಹೆತ್ತ ಅದಿತೀದೇವಿಯಂತೆ ಪ್ರಕಾಶಿಸುತ್ತಿದ್ದುದನ್ನು ಕಂಡು ದಶರಥರಾಜೇಂದ್ರನು ಪರಮಸಂಭ್ರಮದಿಂದ ಮಂಗಳಸ್ನಾನಾದಿಗಳನ್ನು ಮಾಡಿ, ಭೂಸುರವರ್ಗಕ್ಕೆ ಗೋಭೂಹಿರಣ್ಯಾದಿ ಸಕಲದಾನಗಳನ್ನೂ ಮನದಣಿಯೆ ಕೊಟ್ಟು, ಸಕಲರನ್ನೂ ಆದರಿಸಿ, ಸಂತುಷ್ಟಿಗೊಳಿಸಿದನು.

ಈ ನಾಲ್ವರು ಪುತ್ರರತ್ನಗಳಿಗೂ, ದಶರಥರಾಜೇಂದ್ರನು ಜಾತಕರ್ಮನಾಮಕರಣಾದಿ ವಿಧ್ಯುಕ್ತಕರ್ಮಗಳನ್ನು ಸಾಂಗವಾಗಿ ನೆರವೇರಿಸಿ ಕ್ರಮವಾಗಿ ಶ್ರೀರಾಮನೆಂದೂ, ಭರತನೆಂದೂ, ಲಕ್ಷ್ಮಣನೆಂದೂ, ಶತ್ರುಘ್ನನೆಂದೂ ಶುಭನಾಮಧೇಯಗಳನ್ನಿಟ್ಟು ಕರೆದನು. ಇವರಲ್ಲಿ, ಸಾಕ್ಷಾನ್ಮಹಾವಿಷ್ಣುವೇ ಶ್ರೀರಾಮನಾಗಿಯೂ, ವಿಷ್ಣುಶಯ್ಯನಾದ ಆದಿಶೇಷನೇ ಲಕ್ಷ್ಮಣನಾಗಿಯೂ, ವಿಷ್ಣುವಿನ ಶಂಖಚಕ್ರಗಳೇ ಭರತ ಶತ್ರುಘ್ನರಾಗಿಯೂ ಅವತಾರ ಮಾಡಿರುವರೆಂದು ಬ್ರಹ್ಮಜ್ಞಾನಿಗಳಾದ ಮಹರ್ಷಿಗಳು ತಿಳಿದು, ಇನ್ನು ಲೋಕದಲ್ಲಿ ರಾಕ್ಷಸರ ಬಾಧೆಯು ಅಳಿದು ಧರ್ಮವೂ ಶಾಂತಿಯೂ ಸ್ಥಾಪಿಸಲ್ಪಡುವುದು; ಸಜ್ಜನರು ನಿಶ್ಚಿಂತೆಯಿಂದ ಜೀವಿಸಲು ಮಾರ್ಗವಾಗುವುದು, ಎಂದು ಪರಮ ಸಂತೋಷದಿಂದ ಆನಂದಾಶ್ರುಗಳನ್ನು ಸುರಿಸುತ್ತಾ ಭಗವಧ್ಯಾನ ಪರರಾದರು.

ಶಿಶುತನದಲ್ಲಿ ನಾಲ್ವರು ಮಕ್ಕಳೂ ತಮ್ಮ ತಮ್ಮ ಮಾತೆಯರಿಗೂ, ತಂದೆಯಾದ ದಶರಥ ರಾಜೇಂದ್ರನಿಗೂ ಪರಮಾನಂದವನ್ನುಂಟುಮಾಡುತ್ತ, ತಮ್ಮ ಬಾಲಲೀಲೆಗಳಿಂದ ಅವರ ದಾಂಪತ್ಯ ಪ್ರೇಮಬಂಧನಗಳನ್ನು

ವೃದ್ಧಿಗೊಳಿಸುತ್ತ, ಅರಮನೆಯಲ್ಲಿನ ಸಕಲರ ಲಾಲನೆಗೂ ಪಾತ್ರರಾಗಿ, ಶುಕ್ಲಪಕ್ಷದ ಚಂದ್ರಕಾಂತಿಯಂತೆ ಅಭಿವೃದ್ಧಿ ಹೊಂದುತ್ತಿದ್ದರು.



## ಅಧ್ಯಾಯ ೨ 'ಸಿದ್ಧಾಶ್ರಮಕ್ಕೆ'

ದಶರಥರಾಜೇಂದ್ರನ ನಾಲ್ವರು ಮಕ್ಕಳೂ ಅರಮನೆಯಲ್ಲಿ, ತಾಯಿ ತಂದೆಯರ ಆದರ ಪೋಷಣೆಗಳಲ್ಲಿ, ಸೇವಕ ಸೇವಿಕೆಯರ ಲಾಲನೆ ಪಾಲನೆಗಳಲ್ಲಿ ದಿನದಿನಕ್ಕೆ ಬೆಳೆದು ಅಭಿವೃದ್ಧಿಗೊಂಡರು. ಈ ನಾಲ್ವರು ರಾಜಕುಮಾರರೂ ಪರಸ್ಪರ ಪ್ರೇಮಸೌಹಾರ್ದಗಳಿಂದ ಒಬ್ಬರೊಡನೊಬ್ಬರು ಬೆರೆದು ಆಡುತ್ತಿದ್ದರಾದರೂ, ಲಕ್ಷ್ಮಣನು ವಿಶೇಷವಾಗಿ ರಾಮನ ಕಡೆಗೆ ಒಲುವುಳ್ಳವನಾಗಿಯೂ, ಶತ್ರುಘ್ನನು ಭರತನ ಕಡೆಗೆ ಪ್ರೀತಿಯುಳ್ಳವನಾಗಿಯೂ, ಆಟಪಾಟಗಳಲ್ಲಿ ಅವರನ್ನು ಅನುಸರಿಸಿ ಸಂಚರಿಸುತ್ತ ಇರುತ್ತಿದ್ದರು. ಹೀಗಿರುತ್ತಿರಲು ದಶರಥನು ಅವರನ್ನು ಸಕಲ ವಿದ್ಯಾಪಾರಂಗತರನ್ನಾಗಿಸಬೇಕೆಂದು ಕುಲಗುರುಗಳಾದ ವಸಿಷ್ಠಮಹರ್ಷಿಗಳ ವಶಕ್ಕೆ ಒಪ್ಪಿಸಿದನು. ರಾಜಪುತ್ರರಾದ ನಾಲ್ವರು ಬಾಲಕರೂ ತಮ್ಮ ಸಹಪಾಠಿಗಳಾದ ಇತರ ಬಾಲಕರೊಂದಿಗೆ ಬೆರೆದು, ಸ್ವಲ್ಪ ಕಾಲದಲ್ಲೇ ಕ್ಷತ್ರಿಯೋಚಿತವಾದ ಸಕಲ ವಿದ್ಯೆಗಳಲ್ಲೂ ಪಾರಂಗತರಾದರು ದಶರಥರಾಜೇಂದ್ರನು ತೇಜಸ್ವಿಗಳೂ, ಸೂಕ್ಷ್ಮಮತಿಗಳೂ, ಪರಾಕ್ರಮಿಗಳೂ ಆದ ಆ ತನ್ನ ಮಕ್ಕಳನ್ನು ಕಂಡು, ತನ್ನ ಸಮಾನ ಭಾಗ್ಯಶಾಲಿಯು ಪೃಥ್ವಿಯಲ್ಲಿ ಮತ್ತಾರೂ ಇಲ್ಲವೆಂದುಕೊಂಡು ಸಂತೋಷಭರಿತನಾಗಿದ್ದನು.

ಶ್ರೀರಾಮಚಂದ್ರನಿಗೆ ಹದಿನಾರನೆಯ ವಯಸ್ಸು ಸಮೀಪಿಸುತ್ತಿರುವ ಸಮಯ. ಆ ವೇಳೆಗೆ, ವಿಶ್ವಾಮಿತ್ರಮಹರ್ಷಿಗಳು ಬಂದು ತಮ್ಮ ಯಾಗರಕ್ಷಣೆಗಾಗಿ, ಶ್ರೀ ರಾಮನನ್ನು ತಮ್ಮೊಂದಿಗೆ ಕಳುಹಿಸಬೇಕೆಂದು ದಶರಥನನ್ನು ಯಾಚಿಸಿದರು. ದಶರಥರಾಜನು ಪುತ್ರವ್ಯಾಮೋಹದಿಂದ ಅವನನ್ನು ಆಗಲಿರಲು ಸಮ್ಮತಿಸದೆ, ತಾನೇ ಸೈನ್ಯಸಮೇತವಾಗಿ ಬಂದು ಯಾಗಸಂರಕ್ಷಣೆ

ಮಾಡುತ್ತೇನೆಂದನು. ಆ ಮಾತನ್ನು ಕೇಳಿ ಶೀಘ್ರಕೋಪಿಗಳಾದ ಆ ಮುನಿಗಳು ಕುಪಿತರಾಗಿ ಹೊರಡುತ್ತಿರಲು, ವಸಿಷ್ಠಮಹರ್ಷಿಗಳ ಸಲಹೆಯನ್ನು ಕೇಳಿ ಸಂತುಷ್ಟನಾದ ರಾಜನು, ಶ್ರೀರಾಮನನ್ನು ಅವರೊಂದಿಗೆ ಕಳುಹಿಸಲು ಸಮ್ಮತಿಸಿದನು. ಶ್ರೀರಾಮನು ಧನುರ್ಧಾರಿಯಾಗಿ ವಿಶ್ವಾಮಿತ್ರರನ್ನನುಸರಿಸಿ ಹೊರಟೊಡನೆಯೇ, ಲಕ್ಷ್ಮಣನೂ ತನ್ನ ಧನುಸ್ಸನ್ನು ಭುಜದಲ್ಲಿ ಧರಿಸಿ, ಆತನ ಬೆಂಗಾವಲಿಗೆಂದು ಆತನ ಹಿಂದೆಯೇ ಹೊರಟನು.

ಹೀಗೆ ಅಯೋಧ್ಯಾ ರಾಜಧಾನಿಯಿಂದ ಹೊರಟು ಮಾರ್ಗಕ್ರಮಣ ಮಾಡಿ ಹೋಗುತ್ತಿರುವಾಗ, ವಿಶ್ವಾಮಿತ್ರ ಮುನೀಶ್ವರರು ಸುಕುಮಾರ ಶರೀರಗಳಾದ ಆ ರಾಜಪುತ್ರರಿಗೆ ಮಾರ್ಗನಡೆದುದರಿಂದ ಆಯಾಸವುಂಟಾಗದಂತಿರಲೆಂದು ಬಲೆ ಅತಿಬಲೆ ಎಂಬೆರಡು ದಿವ್ಯಮಂತ್ರಗಳನ್ನು ಉಪದೇಶಿಸಿದರು. ಅವುಗಳ ಪ್ರಭಾವದಿಂದ ಆ ಬಾಲಕರಿಗೆ ಯಾವ ಬಗೆಯ ಆಯಾಸವೂ ಉಂಟಾಗದೆ, ಅವರಿಗೆ ಕ್ಷಣಕ್ಷಣಕ್ಕೆ ಉತ್ಸಾಹವೂ ಲವಲವಿಕೆಯೂ ಉಕ್ಕುತ್ತಿದ್ದುವು. ಮಾರ್ಗದಲ್ಲಿ ಶ್ರೀರಾಮನು ತಮ್ಮನ್ನು ಅಟ್ಟಿಕೊಂಡು ಅರ್ಭಟಿಸುತ್ತಾ ಬರುತ್ತಿದ್ದ ತಾಟಕಿಯೆಂಬ ರಾಕ್ಷಸಿಯನ್ನು ವಿಶ್ವಾಮಿತ್ರರ ಆಜ್ಞಾನುಸಾರವಾಗಿ ಸಂಹರಿಸಿದನು. ಇದನ್ನು ಕಂಡು ಸಂತುಷ್ಟರಾದ ವಿಶ್ವಾಮಿತ್ರರು ಶ್ರೀರಾಮನಿಗೆ, ಐಂದ್ರಾಸ್ತ್ರ, ವಾರುಣಾಸ್ತ್ರ, ವಾಯುವ್ಯಾಸ್ತ್ರ, ಆಗ್ನೇಯಾಸ್ತ್ರ, ಶೂಲಾಸ್ತ್ರ, ಸಮ್ಮೋಹನಾಸ್ತ್ರ, ಬ್ರಹ್ಮಾಸ್ತ್ರಗಳೆಂಬ ಮಹಾಸ್ತ್ರಗಳನ್ನೂ, ಧರ್ಮಚಕ್ರ, ದಂಡಚಕ್ರ, ಕಾಲಚಕ್ರ, ವಿಷ್ಣುಚಕ್ರವೆಂಬ ಮಹಾತೀಕ್ಷ್ಣಗಳಾದ ಚಕ್ರಗಳನ್ನೂ, ಹಲವು ದಿವ್ಯಶಕ್ತಿಗಳನ್ನೂ ಪ್ರಯೋಗೋಪಸಂಹಾರಪೂರ್ವಕ ಉಪದೇಶಮಾಡಿ, ಅವುಗಳ ಅಧಿದೇವತೆಗಳ ಅನುಗ್ರಹದೊಂದಿಗೆ ಆಶೀರ್ವಾದಪೂರ್ವಕ ಒಪ್ಪಿಸಿದರು. ಶ್ರೀರಾಮನು ಆ ಸಕಲ ಮಹಾಸ್ತ್ರಗಳ ಮತ್ತು ದಿವ್ಯಶಕ್ತಿಗಳ ಪರಿಚಯವೂ ತನ್ನ ತಮ್ಮನಾದ ಲಕ್ಷ್ಮಣನಿಗೂ ಇರತಕ್ಕುದು ಅತ್ಯಾವಶ್ಯಕವೆಂದು ಭಾವಿಸಿ, ವಿಶ್ವಾಮಿತ್ರರನ್ನು ಅನುಮತಿ ಬೇಡಲು, ಅವರು ಅವುಗಳನ್ನು ಅಗತ್ಯವಾಗಿ ಲಕ್ಷ್ಮಣನಿಗೂ ಉಪದೇಶಿಸಬಹುದೆಂದರು. ಒಡನೆ ಶ್ರೀರಾಮನು, ಶುದ್ಧಾಚಮನ ಮಾಡಿ ಬಂದು ತನ್ನ ಬಳಿ ವಿನಯದಿಂದ ಬದ್ಧಾಂಜಲಿಯಾಗಿ ನಿಂತಿದ್ದ ಲಕ್ಷ್ಮಣನಿಗೆ ತಾನು ವಿಶ್ವಾಮಿತ್ರರಿಂದ ಪಡೆದಿದ್ದ ಸಕಲ ಶಸ್ತ್ರಾಸ್ತ್ರ ರಹಸ್ಯ

ಗಳನ್ನೂ ಉಪದೇಶಿಸಿದನು. ಲಕ್ಷ್ಮಣಸ್ವಾಮಿಯು ಆ ಸಕಲ ಮಹಾಸ್ತ್ರ ಗಳ ಪ್ರಯೋಗೋಪಸಂಹಾರಗಳೊಂದಿಗೆ ಪರಿಚಯಹೊಂದಿ ಆ ಪ್ರಭಾವ ದಿಂದ ಅತಿಶಯ ತೇಜಸ್ವಿಯಾಗಿ ಪ್ರಕಾಶಿಸಿದನು.

ತರುವಾಯ ವಿಶ್ವಾಮಿತ್ರರು, ತಮ್ಮ ಸಿದ್ಧಾಶ್ರಮವನ್ನು ಸೇರಿ ಶ್ರೀ ರಾಮಲಕ್ಷ್ಮಣರಿಗೆ ತಮ್ಮ ಯಾಗಕ್ಕೆ ವಿಘ್ನಕಾರಿಗಳಾಗಿ ಬರುವ ತಾಟಕಾ ಪುತ್ರರಾದ ಸುಬಾಹು ಮಾರೀಚರನ್ನು ವಧಿಸಿ ಅವರ ಬಾಧೆಯಿಂದ ಯಾಗ ಸಂರಕ್ಷಣೆ ಮಾಡಿರೆಂದು ನಿಯಮಿಸಿ, ತಾವು ಸಂಕಲ್ಪಪೂರ್ವಕ ಅಂತರ್ಮು ಖಿಗಳಾಗಿ ಕುಳಿತರು. ಶ್ರೀರಾಮನೂ ಲಕ್ಷ್ಮಣನೂ ಧನುರ್ಬಾಣಧಾರಿಗ ಳಾಗಿ, ಯಾವ ಹೊತ್ತಿಗೆ ದುಷ್ಟ ರಾಕ್ಷಸರಿಂದ ಯಾವ ತೊಂದರೆಯುಂಟಾ ಗುವುದೋ ಎಂದು, ಬಹು ಜಾಗರೂಕರಾಗಿ ಕಾದಿದ್ದರು. ಸ್ವಲ್ಪ ಹೊತ್ತಿ ನಲ್ಲೇ ಸುಬಾಹು ಮಾರೀಚರು ರಕ್ತ ಮಾಂಸ ಅಮೇಧ್ಯಾದಿ ಅಶುದ್ಧಪದಾ ರ್ಥಗಳನ್ನು ಅಂತರಿಕ್ಷದಿಂದ ಹೋಮಾಗ್ನಿಯಲ್ಲಿ ಸುರಿಯಲು ಪ್ರಯತ್ನಿಸು ತ್ತಿದ್ದ ಸುಳಿವನ್ನು ತಿಳಿದು, ಶ್ರೀರಾಮನು ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿ ಆ ನೀಚ ರಾಕ್ಷಸರನ್ನು ಘಾತಿಸಿದನು. ಅವರಲ್ಲಿ ಸುಬಾ ಹುವು ಆ ಬಾಣದ ವೇಗದಿಂದ ರಕ್ತವನ್ನು ಕಾರುತ್ತಾ ಒಡನೆ ಭೂಮಿಗೆ ಬಿದ್ದು ಪ್ರಾಣಬಿಟ್ಟನು. ಮಾರೀಚನು ನೂರು ಯೋಜನಗಳ ದೂರ ಹಾರಿ ಹೋಗಿ, ಲವಣ ಜಲಧಿಯ ಮಧ್ಯದಲ್ಲಿ ಬಿದ್ದನು. ಹೀಗೆ ರಾಕ್ಷಸರ ಬಾಧೆಯು ಪರಿಹಾರವಾಗಲು, ಮಹರ್ಷಿಗಳ ಯಾಗವು ಮುಂದೆ ನಿರಾತಂಕವಾಗಿ ನೆರೆ ವೇರಿತು. ವಿಶ್ವಾಮಿತ್ರರೂ, ಅವರ ಅನುಯಾಯಿಗಳಾದ ಇತರ ಹಲವು ಮಂದಿ ಮಹರ್ಷಿಗಳೂ ಆ ರಾಜಪುತ್ರರ ಪರಾಕ್ರಮಾತಿಶಯವನ್ನು ವಿಶೇಷ ವಾಗಿ ಅಭಿನಂದಿಸುತ್ತಾ, ಅವರನ್ನು ವಿಶೇಷ ರೀತಿಯಿಂದ ಆದರಿಸಿದರು ರಾಮ ಲಕ್ಷ್ಮಣರೂ ಅವರ ಆದರಪೂರ್ವಕವಾದ ಸನ್ಮಾನವನ್ನು ವಿನಯ ಪೂರ್ವಕ ಸ್ವೀಕರಿಸಿ, ಇದೆಲ್ಲವೂ ತಮ್ಮ ಪುಣ್ಯಪ್ರಭಾವವೆಂದು ವಿಶ್ವಾಮಿ ತ್ರರ ಅಡಿದಾವರೆಯಲ್ಲಿ ಸಮರ್ಪಿಸಿ, ನಮಸ್ಕರಿಸಿ ಅವರ ವಿಶೇಷ ಅನುಗ್ರಹ ಆಶೀರ್ವಾದಗಳಿಗೆ ಪಾತ್ರರಾದರು.

ತಾವು ಸಂಕಲ್ಪಿಸಿದ್ದ ಯಾಗವು ಮಹಾಬಾಹುವಾದ ಶ್ರೀರಾಮನ ಬೆಂಬಲದಿಂದ ಯಶಸ್ವಿಯಾಗಿ ನಡೆದುದಕ್ಕಾಗಿ ವಿಶ್ವಾಮಿತ್ರರಿಗೆ ಪರಮಾ

ನಂದವಾಯಿತು. ಆ ಸಂತೋಷದಲ್ಲೇ ಅವರು ಮಾತುಕಥೆಗಳನ್ನಾಡುತ್ತಾ ಕುಳಿತಿರುವ ವೇಳೆಗೆ ಸರಿಯಾಗಿ, ಮಿಥಿಲಾನಗರಿಯ ಅಧಿಪತಿಯಾದ ಜನಕ ರಾಜರ್ಷಿಯಿಂದ ತನ್ನ ಮಗಳಾದ ಜಾನಕಿಯ ಸ್ವಯಂವರಕ್ಕಾಗಿ ದಯ ಮಾಡಿಸಬೇಕೆಂದು ಸ್ವಯಂವರ ಮಹೋತ್ಸವಾಹ್ವಾನ ಪತ್ರಿಕೆಯು ತಲು ಪಿತು. ಅದನ್ನು ಕಂಡು, ತ್ರಿಕಾಲಜ್ಞಾನಿಗಳಾದ ಆ ಮಹರ್ಷಿಗಳು, ಆ ಜಾನಕಿಯನ್ನು ಶ್ರೀರಾಮನಿಗೆ ಘಟನೆಮಾಡಿಸುವ ಸುಯೋಗವನ್ನು ಕಲ್ಪಿಸ ಬೇಕೆಂದು, ತಮ್ಮ ಸಕಲ ಪರಿವಾರಗಳೊಂದಿಗೂ, ಶ್ರೀರಾಮಲಕ್ಷ್ಮಣರೊಂ ದಿಗೂ ಜನಕರಾಜಧಾನಿಗಾಗಿ ಪ್ರಯಾಣವಾಗಿ ಹೊರಟರು. ಮಾರ್ಗದಲ್ಲಿ, ಮಹರ್ಷಿ ಗೌತಮರ ಶಾಪದಿಂದ ಪಂಚೇಂದ್ರಿಯಗಳ ಶಕ್ತಿಯೂ ಉಡುಗಿ ನಿಶ್ಚೇಷ್ಟಿತಳಾಗಿ ಶಿಲೆಯೋ ಎಂಬಂತೆ ಬಿದ್ದಿದ್ದ ಅಹಲ್ಯಾದೇವಿಯನ್ನು, ಶ್ರೀರಾಮನು ವಿಶ್ವಾಮಿತ್ರರ ಪ್ರೇರಣೆಯನ್ನನುಸರಿಸಿ ತನ್ನ ಪಾದಾಂಗುಟದ ಸ್ಪರ್ಶಮಾತ್ರದಿಂದ ಸಚೇತನಳನ್ನಾಗಿಸಿದನು. ತರುವಾಯ ಮಿಥಿಲಾನಗ ರಕ್ಕೆ ಬಂದು ಸೇರಿದ ಅವರು ಜನಕರಾಜನಿಂದ ಸತ್ಕೃತರಾಗಿ ತಮಗಾಗಿ ಏರ್ಪಟ್ಟಿದ್ದ ಬಿಡಾರಗಳಲ್ಲಿ ವಿಶ್ರಮಿಸಿಕೊಂಡರು.

ಒಂದು ದಿನ ರಾಮಲಕ್ಷ್ಮಣರು ವಿಶ್ವಾಮಿತ್ರರ ಅಪ್ಪಣೆಯನ್ನು ಪಡೆದು ನಗರ ಸಂದರ್ಶನಕ್ಕಾಗಿ ಹೊರಟರು. ನಗರದ ಹಲವು ಸುಂದರ ದೃಶ್ಯ ಗಳನ್ನು ನೋಡಿಕೊಂಡು ಹಿಂದಿರುಗುವುದು ಬಹು ಹೊತ್ತಾಯಿತು. ವಿಶ್ವಾ ಮಿತ್ರರು ಎಲ್ಲಿ ಕೋಪಿಸುವರೋ ಎಂದು ಶ್ರೀರಾಮಲಕ್ಷ್ಮಣರು ಶಂಕಿಸುತ್ತಾ ಅವರ ಸನ್ನಿಧಿಯನ್ನು ಸೇರಿ ಭಯಭಕ್ತಿಗಳಿಂದ ವಂದಿಸಿ, ಕೈಜೋಡಿಸಿ ನಿಂತುಕೊಂಡರು. ಆ ರಾಜಕುವರರ ವಿನಯ ವಿಧೇಯತೆಗಳಿಗಾಗಿ ಸಂ ತೋಷಿಸಿದ ವಿಶ್ವಾಮಿತ್ರರು, ಅವರಿಗೆ ವಿಶ್ರಮಿಸಿಕೊಳ್ಳಲು ಹೇಳಲು, ಅವರು ಸ್ವಲ್ಪಹೊತ್ತು ಕುಳಿತು, ತರುವಾಯ ಸಾಯಂಸಂಧ್ಯಾವಂದನೆಯನ್ನು ತೀರಿಸಿ, ಆಹಾರ ಸ್ವೀಕಾರಮಾಡಿದರು. ರಾತ್ರಿ ಆ ಮಹರ್ಷಿಗಳ ಮುಖದಿಂದ ಅಪೂರ್ವವಾದ ಪುರಾತನ ಸಂಗತಿಗಳನ್ನು ಕೇಳಿ ಆಶ್ಚರ್ಯಗೊಳ್ಳುತ್ತ ಶ್ರೀ ರಾಮಲಕ್ಷ್ಮಣರು ಅವರ ದಿವ್ಯಚರಣಗಳನ್ನೊತ್ತುತ್ತ ಸ್ವಲ್ಪಹೊತ್ತು ಕುಳಿ ತಿದ್ದು, ಆಮೇಲೆ ಅವರ ಪಾದದ ಬಳಿಯಲ್ಲೇ ಮಲಗಿ ನಿದ್ರೆಹೋದರು. ಲಕ್ಷ್ಮ ಣನು ಕೇವಲ ಹದಿನೈದು ವರ್ಷಗಳ ಬಾಲಕನಾದರೂ, ತಮ್ಮಣ್ಣನಾದ

ಶ್ರೀರಾಮನ ವಿಷಯದಲ್ಲಿ ಅನನ್ಯಭಕ್ತಿ ಶ್ರದ್ಧೆಗಳನ್ನುಂಟಾಗಿ ಆತನ ಪಾದಗಳನ್ನೇ ಧ್ಯಾನಿಸುತ್ತ ಮಲಗಿ ನಿದ್ರೆಹೋದನು. ಪ್ರಾತಃಕಾಲವಾಗುತ್ತಿರಲು ಮೊದಲು ಲಕ್ಷ್ಮಣನು ಎಚ್ಚರಗೊಂಡು, ಶ್ರೀರಾಮನಿಗೆ ಶೌಚ-ಸ್ನಾನಾದಿಗಳಿಗೆ ಸಿದ್ಧಗೊಳಿಸುವಷ್ಟರಲ್ಲಿ ಶ್ರೀರಾಮನೂ ಎದ್ದು ಸ್ನಾನಸಂಧ್ಯಾದಿಗಳನ್ನು ತೀರಿಸಿಕೊಂಡು ಬಂದು ಗುರುದರ್ಶನಮಾಡಿ, ಪಾದಗಳಿಗೆ ನಮಸ್ಕರಿಸಿದರು. ಹೀಗೆ ತಾವು ಮಹಾರಾಜಾಧಿರಾಜನ ಮಕ್ಕಳಾಗಿದ್ದರೂ ಆ ರಾಮಲಕ್ಷ್ಮಣರು ಗುರುಜನರಲ್ಲಿ ವಿನಯ ವಿಧೇಯತೆಯಿಂದ ನಡೆದು ಸಕಲರಿಗೂ ಮಾರ್ಗದರ್ಶಕರಾದರು.

ವಿಶ್ವಾಮಿತ್ರರೊಂದಿಗೆ ರಾಜಾಸ್ಥಾನಕ್ಕೆ ಕರೆತರಲ್ಪಟ್ಟ ಶ್ರೀರಾಮಲಕ್ಷ್ಮಣರನ್ನು ಕಂಡು ಜನಕರಾಜನು, ಅವರ ತೇಜಸ್ವಿತೆಗಾಗಿ ಪರಮಾನಂದಪಟ್ಟನು. ತನ್ನ ಪುತ್ರಿಯಾದ ಸೀತಾದೇವಿಯನ್ನು ಅವರಲ್ಲಿ ಹಿರಿಯನಾದ ಶ್ರೀರಾಮನಿಗೆ ಕೊಟ್ಟು ವಿವಾಹಮಾಡುವ ಇಚ್ಛೆಯು ಆತನಿಗೆ ವಿಶೇಷವಾಗಿ ಮನಸ್ಸನ್ನು ಬಾಧಿಸಿತಾದರೂ, ಕ್ಷತ್ರಿಯನಾದ ಆತನು ಆ ಮೊದಲೇ ಮಾಡಿದ್ದ ಪ್ರತಿಜ್ಞೆಗೆ ಬದ್ಧನಾಗಿ ನಡೆಯಬೇಕಾಯಿತು. ಮುಂದೆ ಸ್ವಲ್ಪಹೊತ್ತಿನಲ್ಲೇ ಆತನ ಆಜ್ಞೆಯಿಂದ ಅಗಾಧವಾದ ಶೈವಧನುಸ್ಸು ಸ್ವಯಂವರ ಮಂಟಪದ ಮಹಾಸಭೆಯಲ್ಲಿ, ನೆರೆದ ಸಕಲ ರಾಜಲೋಕದ ಸಮ್ಮುಖಕ್ಕೆ ತಂದಿಡಲ್ಪಟ್ಟಿತು.

'ಈ ಶೈವ ಧನುಸ್ಸನ್ನು ಹೆದೆಯೇರಿಸಿ ನಾಣುಬಿಗಿದ ವೀರನು ಜಾನಕಿಯ ಪಾಣಿಗ್ರಹಣ ಮಾಡಬಹುದು' ಎಂದು ಜನಕರಾಜನು ಸಭೆಯಲ್ಲಿ ತನ್ನ ಪ್ರತಿಜ್ಞೆಯನ್ನು ಪ್ರಕಟಗೊಳಿಸಿದನು. ಅದನ್ನುಕೇಳಿದ ರಾಜಪುತ್ರರನೇಕರು ನಾನು ಮುಂದೆ ತಾನು ಮುಂದೆಂದು ದೀಪಕ್ಕೆರಗುವ ಶಲಭಗಳಂತೆ ಆ ಧನುಸ್ಸಿನ ಬಳಿಗೆಬಂದು, ಅದನ್ನು ಅಗುಲಾಡಿಸಲೂ ಶಕ್ತಿಸಾಲದೆ ಅವಮಾನಗೊಂಡು ಹಿಂತೆರಳಿದರು. ಈ ಪರಿಸ್ಥಿತಿಯು ಜನಕರಾಜನಿಗೆ ಬಹು ಬೇಸರವನ್ನುಂಟುಮಾಡಿತು. ಆಗ ಆತನು-'ಇದೇನಿದು, ಭೂಮಿಯು ನಿರ್ವೀರ್ಯವಾಯಿತೇ! ಈ ಸಭೆಯಲ್ಲಿ ಈ ಧನುಸ್ಸನ್ನು ಎತ್ತಿ ನಾಣೇರಿಸುವ ವೀರನಾವನೂ ಇಲ್ಲವೆ?' ಎಂದು ಗರ್ಜಿಸಿದನು.

ಲಕ್ಷ್ಮಣನಿಗೆ ಶ್ರೀರಾಮನಲ್ಲಿದ್ದ ಭಕ್ತಿಯೆಂಬುದು ಅತುಲನೀಯ. ಆತನು ಏನನ್ನಾದರೂ ಸಹಿಸುವನು; ಆದರೆ ಶ್ರೀರಾಮನಿಗಾದ ಅಪಮಾನ, ತಿರಸ್ಕಾರ, ದುಃಖ ಇವುಗಳನ್ನು ಮಾತ್ರ ಸಹಿಸಲಾರನು. ಈಗ ಜನಕ ರಾಜನು ಜಗದೇಕ ವೀರನಾದ ಶ್ರೀರಾಮನೆದುರಿಗೆ - 'ಏನು ಭೂಮಿಯು ನಿರ್ವೀರ್ಯವಾಯಿತೆ? ಈ ಸಭೆಯಲ್ಲಿ ವೀರನಾವನೂ ಇಲ್ಲವೆ?' ಎಂದು ನುಡಿದ ಮಾತುಗಳು ಆತನಿಗೆ ಅಸಹ್ಯವೇದನೆಯನ್ನುಂಟುಮಾಡಿದುವು. ಒಡನೆ ಆ ಬಾಲವೀರನು ಘುಡಿಘುಡಿಸುತ್ತಾ ಮೇಲಕ್ಕೆದ್ದು, -' ರಘುವಂಶ ಪ್ರವರನಾದ-ನಮ್ಮಣ್ಣನಾದ ಶ್ರೀರಾಮನು ಕೋದಂಡಧಾರಿಯಾಗಿ ಈ ಸಭೆ ಯಲ್ಲಿ ಕುಳಿತಿರುವಾಗ - ಧರೆಯು ನಿರ್ವೀಯವಾಯಿತೇ - ಈ ಸಭೆಯಲ್ಲಿ ವೀರ ಇಲ್ಲವೆ? ಎಂದು ನುಡಿಯುವವರು ಬಹು ಸಾಹಸದ ಮಾತುಗಳನ್ನಾಡಿರು ವರು. ಆತನ ಅಜ್ಞೆಯಿಲ್ಲದುದರಿಂದ ನಾನು ಕುಳಿತಿರಬೇಕಾಗಿದೆ. ಇಲ್ಲ ದಿದ್ದಲ್ಲಿ ಈ ಬಿಲ್ಲನ್ನು ಜಯಿಸುವುದು ಎಷ್ಟರ ಕಾರ್ಯವು' ಎಂದು ಅರ್ಭಟಿಸಿ ದನು. ಆ ಬಾಲವೀರನ ನುಡಿಯನ್ನು ಕೇಳಿ ರಾಜಲೋಕವು ಬೆದರಿ ನೋಡಿ ತು. ಭೂಮಿಯು ಕಂಪಿಸಿದಂತಾಯಿತು. ಸೀತೆಯ ಹೃದಯಕಮಲವು ವಿಕ ಸಿತವಾಯಿತು. ಜನಕರಾಜನಿಗೆ ಪುನಃ ಆಸೆಯುದಯಿಸಿತು. ವಿಶ್ವಾಮಿತ್ರ ರಾದಿಯಾಗಿ ಸಕಲ ಮುನಿಗಣವೂ ರೋಮಾಂಚಗೊಂಡು ಆನಂದಬಾಷ್ಪ ವನ್ನುದುರಿಸಿದರು. ಎಲ್ಲರೂ ಆ ಕಡೆಗೆ ತಿರುಗಿ, ತೇಜಸ್ವಿಯಾದ ಶ್ರೀರಾಮ ನನ್ನೂ ಆತನ ಆಜಾನುಬಾಹುಗಳನ್ನೂ ವಿಶಾಲ ವಕ್ಷಸ್ಥಲವನ್ನೂ ಮಹಾ ಪುರುಷ ಲಕ್ಷಣಗಳನ್ನೂ ನೋಡಿ, ಈ ವೀರನಿಗೆ ಧನುಸ್ಸು ಸ್ವಾಧೀನವಾದರೂ ಆಗಬಹುದು ಎಂದುಕೊಂಡರು. ಆ ಸಂದರ್ಭವನ್ನು ತಿಳಿದು ವಿಶ್ವಾಮಿತ್ರರೂ ಕಣ್ಣುಸಂಜ್ಞೆಯಿಂದ ರಾಮನಿಗೆ ಅನುಮತಿಕೊಟ್ಟರು.

ಒಡನೆ ಮಹಾಬಾಹುವಾದ ಶ್ರೀರಾಮನು ಲಕ್ಷ್ಮಣನನ್ನು ಹಸನ್ಮುಖ ದಿಂದ ಆದರಿಸಿ ಕುಳ್ಳಿರಿಸಿ, ಬಾಹುಬಲಶಾಲಿಗಳಾದ ಹಲವು ಮಂದಿ ರಾಜ ರಿಗೇ ಅಸಾಧ್ಯವೆನ್ನಿಸಿ- ಅವಮಾನಗೊಳಿಸಿದ್ದ ಆ ಧನುಸ್ಸನ್ನು ಅವಲೀಲೆ ಯಿಂದ ಎತ್ತಿ ಅದಕ್ಕೆ ನಾಣೇರಿಸಲು ಪ್ರಯತ್ನಿಸುತ್ತಿರಲು, ಆ ಬಿಲ್ಲು ಮಧ್ಯಕ್ಕೆ ಎರಡು ತುಂಡಾಗಿ ಮುರಿದುಹೋಯಿತು. ಅದನ್ನು ಕಂಡು ಅಂತರಿಕ್ಷದಲ್ಲಿ ದೇವತೆಗಳು ಶ್ರೀರಾಮನಮೇಲೆ ಪುಷ್ಪವೃಷ್ಟಿಯನ್ನು ಕರೆ

ದರು. ಸಕಲ ಋಷಿಮುನಿಗಳೂ ನೆರೆದ ಬ್ರಾಹ್ಮಣೋತ್ತಮರೂ ಜಯ ಜಯವೆಂದು ಜಯಘೋಷಮಾಡಿ ಆಶೀರ್ವದಿಸಿದರು. ಧನುಸ್ಸಿಗೆ ನಾಣೇರಿಸಿ ಕಟ್ಟಿದ ವೀರನನ್ನು ವರಿಸಬೇಕೆಂದು ಪುಷ್ಪಹಾರವನ್ನು ಹಿಡಿದು ನಿಂತಿದ್ದ ಸೀತಾದೇವಿಯು ನಸು ಲಜ್ಜೆಯಿಂದ ಬೆರೆದು ನವ ಮನ್ಮಥಾಕಾರನಾದ ಆ ತನ್ನ ಪ್ರಾಣನಾಥನ ಕಂಠದಲ್ಲಿ ದಿವ್ಯ ಪುಷ್ಪಹಾರವನ್ನು ಸಮರ್ಪಿಸಿದಳು.

ಜನಕಮಹಾರಾಜನೂ, ನೆರೆದ ಸಕಲ ಮುನಿವೃಂದವೂ ರಾಜಲೋಕವೂ ಸೀತಾರಾಮರ ಆ ಅನುರೂಪ ದಾಂಪತ್ಯವನ್ನು ಕಂಡು ಪರಮಸಂತುಷ್ಟರಾದರು. ಜನಕರಾಜನಿಗೆ, ಯಜ್ಞಭೂಮಿಯಲ್ಲಿ ದೊರೆತ ಈ ಸೀತಾದೇವಿಯಲ್ಲದೆ, ಆತನ ಸ್ವಂತ ಭಾರ್ಯೆಯ ಗರ್ಭದಲ್ಲಿ ಜನಿಸಿದ ಮತ್ತೊಬ್ಬ ಮಗಳೂ ಇದ್ದಳು. ಅಲ್ಲದೆ ಆತನ ತಮ್ಮನಿಗೂ ಇಬ್ಬರು ಹೆಣ್ಣುಮಕ್ಕಳಿದ್ದು ಅವರೂ ವಿವಾಹಯೋಗ್ಯ ವಯಸ್ಕರಾಗಿದ ರು. ಆ ನಾಲ್ವರು ಕನ್ಯೆಯರ ವಿವಾಹಗಳನ್ನೂ ಒಮ್ಮೆಗೇ ಮಾಡಬೇಕೆಂದು ಆತನಿಗೆ ಬಹುದಿನಗಳಿಂದಲೂ ಮನಸ್ಸಿದ್ದಿತು. ಈಗ ವಿಶ್ವಾಮಿತ್ರರಿಂದ ಶ್ರೀರಾಮಚಂದ್ರನಿಗೆ ಲಕ್ಷ್ಮಣನಲ್ಲದೆ ಮತ್ತಿಬ್ಬರು ತಮ್ಮಂದಿರೂ ಇರುವರೆಂಬ ವಾರ್ತೆಯನ್ನು ಕೇಳಿದ ಆತನು ಪರಮಾನಂದಪಟ್ಟು, ಸಕಲ ಪರಿವಾರಯುಕ್ತರಾಗಿ ಹೊರಟುಬಂದು ತನ್ನ ಮನೆಯ ನಾಲ್ಕುಮಂದಿ ಕನ್ಯೆಯರನ್ನೂ ನಿಮ್ಮ ನಾಲ್ಕು ಮಂದಿ ಪುತ್ರರಿಗೂ ಸ್ವೀಕರಿಸಿ, ನನ್ನನ್ನು ಕೃತಾರ್ಥನನ್ನಾಗಿಸಬೇಕು'ಎಂಬದಾಗಿ ದಶರಥ ಸಾರ್ವಭೌಮನಿಗೆ ವಿವಾಹ ಮಹೋತ್ಸವಾಹ್ವಾನ ಪತ್ರಿಕೆಯನ್ನು ಬರೆಯಿಸಿ ಕಳುಹಿಸಿದನ.

ವಿಶ್ವಾಮಿತ್ರ ಮಹರ್ಷಿಗಳೊಂದಿಗೆ ಪಾದಚಾರಿಗಳಾಗಿ ಹೋದ ತನ್ನ ಸುಕುಮಾರರೇನಾದರೋ ಎಂಬ ಚಿಂತೆಯಿಂದ ಸೊರಗುತ್ತ ಕುಳಿತಿದ್ದ ದಶರಥನಿಗೆ, ಜನಕರಾಜೇಂದ್ರನ ದೂತರು ಮೇಲ್ಕಂಡ ಲಗ್ನಪತ್ರಿಕೆಗಳನ್ನು ತಲುಪಿಸಿದರು. ಅವುಗಳಲ್ಲಿದ್ದ ಒಕ್ಕಣೆಯನ್ನು ಓದಿಸಿ ಕೇಳಿದ ಆ ರಾಜನ ಮನಸ್ಸಿನಲ್ಲುಂಟಾದ ಆನಂದೋದ್ವೇಗದ ಪ್ರಮಾಣವಿಷ್ಟೆಂದು ತಿಳಿಯುವನಾರು? ವಿವರಿಸುವನಾರು? ಒಡನೆ ಆ ಸಂತೋಷವಾರ್ತೆಯನ್ನು ತನ್ನ ಮೂವರು ರಾಣಿಯರಿಗೂ ತಿಳಿಸಿ, ಸಕಲ ಪರಿವಾರವೂ ಶ್ರೀರಾಮಾದಿಗಳ

ವಿವಾಹಕ್ಕಾಗಿ ಮಿಥಿಲಾನಗರಿಗೆ ಪ್ರಯಾಣಮಾಡಬೇಕೆಂದು ಆಜ್ಞಾಪಿಸಿದನು. ಮಂತ್ರಿಗಳು ರಾಜಾಜ್ಞೆಯಿಂದ ಸಕಲ ಸಾಮಗ್ರಿಗಳನ್ನೂ ಸಿದ್ಧಪಡಿಸಿ ಪ್ರಯಾಣಕ್ಕೆ ಸನ್ನದ್ಧರಾದರು.

ಬಹುದೂರ ಪ್ರಯಾಣವನ್ನು ಶೀಘ್ರದಲ್ಲೇ ಕಳೆದು ತನ್ನ ರಾಜಧಾನಿಯ ಬಳಿಗೆ ಬಂದ ದಶರಥಸಾರ್ವಭೌಮನನ್ನು ಉಚಿತಪ್ರಕಾರದಿಂದ ಕಂಡು ಆದರಿಸಿ ಜನಕರಾಜೇಂದ್ರನು ಯೋಗ್ಯ ಬಿಡಾರಗಳಲ್ಲಿಳಿಸಿ ಉಪಚರಿಸಿದನು. ತರುವಾಯ ಉಭಯ ರಾಜರುಗಳೂ ಉತ್ಸಾಹವಂತರಾಗಿ ನಡೆಯಿಸಲು ಇಚ್ಛಿಸಿದ್ದಂತೆಯೇ ವಿವಾಹಾಂಗವಾದ ಸಕಲ ಮಹೋತ್ಸವಗಳೂ ಪ್ರಾರಂಭವಾದುವು. ಜನಕರಾಜನು ವೀರ್ಯಶುಲ್ಕಳಾದ ಜಾನಕೀದೇವಿಯನ್ನು ಹರಧನುರ್ಭಂಗಮಾಡಿದ ಜಗದೇಕವೀರನಾದ ಶ್ರೀರಾಮಚಂದ್ರನಿಗೂ, ತನ್ನ ಸ್ವಂತ ಮಗಳಾದ ಊರ್ಮಿಳಾದೇವಿಯನ್ನು ಲಕ್ಷ್ಮಣಸ್ವಾಮಿಗೂ, ತನ್ನ ತಮ್ಮನ ಮಕ್ಕಳಾದ ಮಾಂಡವೀ ಶ್ರುತಕೀರ್ತಿಯರೆಂಬಿಬ್ಬರು ಕನ್ಯಾಮಣಿಯರನ್ನು ಕ್ರಮವಾಗಿ ಭರತ ಶತ್ರುಘ್ನರಿಗೂ ಕೊಟ್ಟು ಸಕಲ ಸಜ್ಜನ ಸಮ್ಮತವಾದ ರೀತಿಯಲ್ಲಿ ವಿಶೇಷ ವೈಭವದಿಂದ ವಿವಾಹ ಮಹೋತ್ಸವವನ್ನು ನೆರವೇರಿಸಿದನು. ಆ ಕನ್ಯಾದಾನದೊಂದಿಗೇ ಸತ್ಪಾತ್ರಗಳಲ್ಲಿ ಗೋ ಭೂ ಹಿರಣ್ಯಾದಿ ಸಕಲ ದಾನಗಳೂ ಯಥಾವಿಧಿಯಾಗಿ ಸಮರ್ಪಿಸಲ್ಪಟ್ಟುವು. ಸಕಲರೂ ಅನ್ನದಾನ ವಸ್ತ್ರದಾನಾದಿಗಳಿಂದ ಪರಮಸಂತುಷ್ಟರಾದರು.



## ಅಧ್ಯಾಯ ೩ 'ವನವಾಸ'

ವಿವಾಹಾಂಗವಾದ ಸಕಲ ವೈಭವಗಳೂ ಮುಗಿದ ತರುವಾಯ, ದಶರಥರಾಜೇಂದ್ರನು ಸಕಲ ಪರಿವಾರಯುಕ್ತನಾಗಿ, ಜನಕರಾಜನ ಅನುಮತಿ ಪಡೆದು, ತನ್ನ ರಾಜಧಾನಿಯನ್ನು ಕುರಿತು ಪ್ರಯಾಣಮಾಡಿದನು. ಮಾರ್ಗ ಮಧ್ಯದಲ್ಲಿ, ಇಪ್ಪತ್ತೊಂದು ಸಾರಿ ಭೂಪ್ರದಕ್ಷಿಣೆ ಮಾಡಿ ಕ್ಷತ್ರಿಯ ವಂಶ

ವನ್ನು ನಿರ್ಮೂಲಗೊಳಿಸಿದ ಪರಶುರಾಮನು ಅವರಿಗೆ ಎದುರಾಗಿ, ಅಡ್ಡಗಟ್ಟಿದನು. ಆತನನ್ನು ಕಂಡು ದಶರಥರಾಜನು ನಡುಗಿ ಹೋದನು. ಆಗ ಶ್ರೀರಾಮನು, ತನ್ನ ತಂದೆಯನ್ನು ಸಮಾಧಾನಗೊಳಿಸಿ, ಪರಶುರಾಮನು ತಂದುಕೊಟ್ಟ-ವೈಷ್ಣವ ಧನುಸ್ಸನ್ನು ಭಂಗಿಸಿ, ಒಂದಿಗೇ ಆತನ ಸತ್ವವೆಲ್ಲವನ್ನೂ ಅಪಹರಿಸಿಬಿಟ್ಟನು ಪರಶುರಾಮನು ಸಾಕ್ಷಾದ್ವಿಷ್ಣುವೇ ನರಾವತಾರದಲ್ಲಿ ರಾಮರೂಪದಿಂದ ಬಂದಿರುವನೆಂಬುದನ್ನು ತಿಳಿದು ಪರಮಸಂತುಷ್ಟನಾಗಿ, ಅಭಿನಂದಿಸಿ, ಕಳುಹಿಸಿಕೊಟ್ಟನು ತರುವಾಯ ಸಕಲರೂ ಸುಖಪ್ರಯಾಣಮಾಡಿ ಅಯೋಧ್ಯೆಯನ್ನು ಸೇರಿದರು.

ಅಯೋಧ್ಯೆಯಲ್ಲಿ ಶ್ರೀರಾಮಾದಿಗಳು ತಮ್ಮ ತಮ್ಮ ಅರಮನೆಗಳಲ್ಲಿ ತಮ್ಮ ಪತ್ನಿಯರೊಂದಿಗೆ ವಾಸಿಸುತ್ತ, ಸಕಲ ದಾಂಪತ್ಯ ಭೋಗಗಳನ್ನೂ ಅನುಭವಿಸುತ್ತ ಎಂಟು ವರ್ಷಗಳಷ್ಟು ಕಾಲವನ್ನು ಸುಖ ಸಂತೋಷಗಳಿಂದ ಕಳೆದರು. ಮುಂದೆ ಕೆಲವು ದಿನಗಳು ಕಳೆಯಲು, ಭರತನು ತನ್ನ ಸೋದರಮಾವನ ಊರಿಗೆ ಹೊರಟು ಹೋದನು. ಅವನನ್ನು ಅನುಸರಿಸಿ ಶತ್ರುಘ್ನನೂ ಪ್ರಯಾಣಮಾಡಿದನು. ಅದರೆ ರಾಮನನ್ನು ದೇಹದ ನೆಳಲೋ ಎಂಬಂತೆ ಆಶ್ರಯಿಸಿಕೊಂಡಿದ್ದ ಲಕ್ಷ್ಮಣನು, ಸದಾ ಶ್ರೀರಾಮನ ಸೇವೆಯಲ್ಲೇ ನಿರತನಾಗಿ ಆತನ ಬಳಿಯಲ್ಲೇ ಇರುತ್ತಿದ್ದನು ರಾಮನಲ್ಲಿ ಆತನ ಸ್ನೇಹ ಪ್ರೇಮಗಳು ಎಷ್ಟು ಮಟ್ಟಿಗಿದ್ದವೆಂದರೆ, ಶ್ರೀರಾಮನಿಲ್ಲದಿದ್ದಲ್ಲಿ ಅವನಿಗೆ ಆಹಾರವು ರುಚಿಸದು, ನಿದ್ರೆ ಬಾರದು. ಜೀವನವೇ ಭಾರವೆಂಬಂತೆ ತೋರುವುದು.

ದಶರಥ ರಾಜೇಂದ್ರನು ತನಗೆ ಅಧಿಕ ವಯಸ್ಸಾದುದರಿಂದ, ಇನ್ನು ತನ್ನ ಜ್ಯೇಷ್ಠಪುತ್ರನೂ ಸಕಲ ಸದ್ಗುಣಪರಿಪೂರ್ಣನೂ ಆದ ಶ್ರೀರಾಮಚಂದ್ರನಿಗೆ ಯೌವರಾಜ್ಯಾಭಿಷೇಕಮಾಡಿ, ರಾಜ್ಯಭಾರವನ್ನು ಒಪ್ಪಿಸಬೇಕೆಂದಿದ್ದ ತನ್ನ ಅಭಿಪ್ರಾಯವನ್ನು ಆಪ್ತರಾದ ಮಂತ್ರಿವರ್ಗವನ್ನೂ ಪ್ರಜಾಪ್ರಮುಖರನ್ನೂ ಕರೆಸಿ, ಅವರಿಗೆ ತಿಳಿಸಿದನು. ಅವರೆಲ್ಲರೂ ಆ ಶುಭವಾರ್ತೆಯನ್ನು ಕೇಳಿ ಪರಮ ಸಂತೋಷದಿಂದ ಶ್ರೀರಾಮಚಂದ್ರನಿಗೆ ಯೌವರಾಜ್ಯಾಭಿಷೇಕಮಾಡಿ, ರಾಜ್ಯಭಾರವನ್ನು ಒಪ್ಪಿಸಬಹುದೆಂದು ತಮ್ಮ ಅನುಮತಿಯನ್ನು ಸೂಚಿಸಿದರು. ಅಭಿಷೇಕ ಸಾಮಗ್ರಿಗಳೆಲ್ಲ ಸಿದ್ಧವಾಗಿ, ಮಾರ

ನೆಯ ದಿನವೇ ಆ ಮಹೋತ್ಸವವು ನಡೆಯತಕ್ಕದ್ದೆಂದು ಪ್ರಕಟಗೊಳಿಸಲ್ಪಟ್ಟಿತು.

ಆ ಸಂದರ್ಭದಲ್ಲಿ ಅರಮನೆಯ ಅಂತಃಪುರದಲ್ಲಿ ಒಂದು ದುರಂತ ಪ್ರಸಂಗವು ನಡೆಯಿತು. ಧೂರ್ತಳಾದ ಮಂಥರೆಯ ಪ್ರೇರಣೆಯಿಂದ ಕೈಕೇಯಿಯು ದಶರಥರಾಜನನ್ನು ತನ್ನ ಮಾತುಗಳ ನಿರ್ಬಂಧಕ್ಕೆ ಒಳಪಡಿಸಿಕೊಂಡು, ಪೂರ್ವದಲ್ಲಿ ತನಗೆ ಕೊಟ್ಟಿದ್ದ ಎರಡು ವರಗಳಲ್ಲಿ ಒಂದಕ್ಕೆ ಶ್ರೀರಾಮನನ್ನು ಹದಿನಾಲ್ಕು ವರ್ಷಕಾಲ ಅರಣ್ಯವಾಸಕ್ಕೆ ಕಳುಹಿಸಬೇಕೆಂದೂ ಮತ್ತೊಂದಕ್ಕೆ ತನ್ನ ಮಗನಾದ ಭರತನಿಗೆ ಅಯೋಧ್ಯೆಯಲ್ಲಿ ಯೌವರಾಜ್ಯಾಭಿಷೇಕಮಾಡಿ ರಾಜ್ಯಭಾರವನ್ನು ಒಪ್ಪಿಸಿಕೊಡಬೇಕೆಂದೂ, ವಾಗ್ದಾನ ಪಡೆದಳು. ವೃದ್ಧನಾದ ದಶರಥರಾಜೇಂದ್ರನು ತಾನು ಕೊಟ್ಟ ವಾಕ್ಯಕ್ಕೆ ವ್ಯತಿರಿಕ್ತವಾಗಿ ನಡೆಯಲಾರದೆಯೂ, ತನಗೆ ಬಹಿಃಪ್ರಾಣವೋ ಎಂಬಂತಿದ್ದ ಶ್ರೀರಾಮನನ್ನು ಅಗಲಿರಲು ಇಷ್ಟವಿಲ್ಲದೆಯೂ ತೊಳಲಲಾರಂಭಿಸಿದನು. ಸ್ವಲ್ಪಹೊತ್ತಿನಲ್ಲೇ ಈ ವಾರ್ತೆಯು ಶ್ರೀರಾಮನಿಗೆ ತಿಳಿಯಿತು. ಲಕ್ಷ್ಮಣನಾದರೋ ತಮ್ಮಣ್ಣನಾದ ಶ್ರೀರಾಮನಿಗೆ ರಾಜ್ಯಾಭಿಷೇಕವಾಗುವುದೆಂಬ ವಾರ್ತೆಯನ್ನು ಕೇಳಿ, ಹಿಡಿಸಲಾರದಷ್ಟು ಆನಂದಗೊಂಡಿದ್ದನು. ತಮ್ಮಣ್ಣನಾದ ಶ್ರೀರಾಮನು ರಾಜಸಿಂಹಾಸನದಮೇಲೆ ಶ್ವೇತಚ್ಛತ್ರದಡಿಯಲ್ಲಿ ಕುಳಿತು ಮಂತ್ರಿ ಸಾಮಂತರಿಂದ ಗೌರವಿಸಲ್ಪಡುವುದನ್ನೂ ಪ್ರಜೆಪರಿವಾರಗಳನ್ನು ಮಕ್ಕಳಂತೆ ಪ್ರೇಮದಿಂದ ಪಾಲಿಸುವುದನ್ನೂ ನೋಡಬೇಕೆಂದು, ಆತನಿಗೆ ಮಹದಾಶಯವಿದ್ದಿತು. ಆದರೆ ಶ್ರೀರಾಮನಿಗೆ, ಕೈಕೇಯಿಯ ಮಾತಿಗೆ ಅಧೀನನಾದ ದಶರಥನಿಂದ ವನವಾಸಕ್ಕಾಗಿ ಆಜ್ಞೆಯಾಯಿತೆಂದು ಕೇಳಿದೊಡನೆಯೇ ಅವನ ಆಸೆಯೆಲ್ಲಾ ನಿರಾಶೆಯಾಯಿತು. ಉತ್ಸಾಹವು ಅಡಗಿಹೋಯಿತು. ಮೊದಲಿದ್ದ ಸಂತೋಷದ ಸ್ಥಾನವನ್ನು ರೋಷವು ಆಕ್ರಮಿಸಿತು. ಲಕ್ಷ್ಮಣನಿಗೆ ಶ್ರೀರಾಮನಲ್ಲಿ ಅತಿಶಯ ಪ್ರೇಮವಿದ್ದಿತು. ನಿಜ, ಆದರೆ ರಘುವಂಶಕ್ಕೆ ಜ್ಯೇಷ್ಠ ಪುತ್ರನಾದ ತಾನು ರಾಜಸಿಂಹಾಸನಕ್ಕೆ ತನಗಿದ್ದ ಬಾಧ್ಯತೆಯನ್ನು ಅಷ್ಟು ಸುಲಭವಾಗಿ ಬಿಟ್ಟುಕೊಟ್ಟನಲ್ಲಾ, ಅದು ತಪ್ಪು ಎಂಬುದು ಅವನ ಅಭಿಪ್ರಾಯವಾಗಿತ್ತು. ಲಕ್ಷ್ಮಣದೇವನ ಸ್ವಭಾವವು ಬಹು ಖಂಡಿತ ಪ್ರಕೃತಿಯದು! ತನ್ನ ಮನಸ್ಸಿಗೆ ಸರಿಯೆಂದು ತೋರಿದುದನ್ನು ಸ್ಪಷ್ಟವಾ

ಕ್ಯಗಳಿಂದ ಹೇಳಿಬಿಡುವನು. ಅನೇಕ ಸಂದರ್ಭಗಳಲ್ಲಿ ಶ್ರೀರಾಮನ ವಾಕ್ಯಗಳನ್ನೇ-ಅಭಿಪ್ರಾಯವನ್ನೇ ಖಂಡಿಸಿ ಬಿಡುವನು. ಆದರೆ ಆತನು ತನ್ನ ಅಂತಿಮ ನಿಶ್ಚಯವಿಂಥವೆಂದು ಹೇಳಿಬಿಟ್ಟಮೇಲೆ ತನ್ನ ಸಂಪೂರ್ಣ ಅಭಿಪ್ರಾಯವನ್ನೂ ಬದಲಾಯಿಸಿಕೊಂಡು ಆತನ ಆಜ್ಞೆಗೆ ವಿಧೇಯವಾಗಿ ನಡೆಯುವನು.

ಶ್ರೀರಾಮನು ಕೈಕೇಯಿಯಾ ದಶರಥರಿಂದ ವನವಾಸಕ್ಕೆ ಅನುಜ್ಞೆಯನ್ನು ಪಡೆದು, ಆ ಸಂಗತಿಯನ್ನು ತನ್ನ ಮಾತೆಯಾದ ಕೌಸಲ್ಯೆಗೆ ತಿಳಿಸಲಿಕ್ಕಾಗಿ ಆಕೆಯ ಅಂತಃಪುರಕ್ಕೆ ನಡೆದನು.-ಮತ್ತು ಪಾದಗಳಿಗೆ ನಮಸ್ಕರಿಸಿ ರಾಜ್ಯಾಭಿಷೇಕಕ್ಕೆ ಪ್ರತಿಯಾಗಿ ತನಗೆ ವನವಾಸಕ್ಕೆ ಆಜ್ಞೆಯಾಯಿತೆಂಬ ವಾರ್ತೆಯನ್ನು ಆಕೆಗೆ ತಿಳಿಸಿದನು. ಕೌಸಲ್ಯಾದೇವಿಗೆ ಆ ಮಾತನ್ನು ಕೇಳಿ ಅಪಾರ ದುಃಖವುಂಟಾಯಿತೆಂದು ಹೇಳಬೇಕೇನು! ಆ ಸಂದರ್ಭದಲ್ಲಿ ಲಕ್ಷ್ಮಣಸ್ವಾಮಿಯು ಆಕೆಯ ಪಾದಕ್ಕೆ ನಮಸ್ಕರಿಸಿ-'ತಾಯೀ ಶೋಕಿಸದಿರು. ನಾನು ಸತ್ಯವಾಗಿಯೂ ಶಪಥಮಾಡಿ ಹೇಳುತ್ತೇನೆ. ನಾನು ಶ್ರೀರಾಮನ ಅನುಯಾಯಿಯು, ಆತನು ಅಗ್ನಿಯಲ್ಲಿ ಪ್ರವೇಶಿಸಲಿ-ವನವನ್ನು ಪ್ರವೇಶಿಸಲಿ! ಆತನಿಗಿಂತ ನಾನು ಮೊದಲು ಪ್ರವೇಶಿಸುವೆನೆಂದು ತಿಳಿ. ಸೂರ್ಯನು ತನ್ನ ಕಿರಣಗಳಿಂದ ಲೋಕದ ಅಂಧಕಾರವನ್ನು ಹೇಗೆ ಪರಿಹರಿಸುವನೋ ಹಾಗೆಯೇ ನಾನೂ ನನ್ನ ಪರಾಕ್ರಮದಿಂದ ಶ್ರೀರಾಮನಿಗೆ ಒದಗಿ ಬಂದಿರುವ ಈ ಸಂಕಟವನ್ನು ನೀಗಿಸುವೆನು. ನನ್ನ ಸಾಮರ್ಥ್ಯವನ್ನಾದರೂ ನೋಡು' ಎಂದು ಸಮಾಧಾನಪಡಿಸಲು ಯತ್ನಿಸಿದನ. ತರುವಾಯ ಶ್ರೀರಾಮನನ್ನು ಕುರಿತು-'ಹೇ ಆರ್ಯ ರಾಮಚಂದ್ರ, ರಘುವಂಶದಲ್ಲಿ ಇಂತಹ ಅನ್ಯಾಯವು ಎಂದೂ ನಡೆದುದಿಲ್ಲ. ಜ್ಯೇಷ್ಠಕುವರನಾದ ನೀನು ನಿನ್ನಸ್ವಂತ ಹಕ್ಕಾದ ಸಿಂಹಾಸನವನ್ನು ಬಿಡುವ ಕಾರಣವೇನಿದೆ? ಆ ಹೆಂಗಸಿನ ಮಾತನ್ನು ಲಕ್ಷ್ಯಮಾಡದೆ ನೀನು ಸಿಂಹಾಸನಾರೋಹಣಮಾಡು. ನಾನು ಧನುರ್ಬಾಣಧಾರಿಯಾಗಿ ನಿನ್ನಬೆಂಗಾವಲಿಗಿರುವೆನು. ಈ ಅಯೋಧ್ಯೆಯಲ್ಲಿ ಕೈಕೇಯಿಯೊಬ್ಬಳಲ್ಲದೆ, ನಿನ್ನ ರಾಜ್ಯಾಭಿಷೇಕಕ್ಕೆ ವಿರೋಧಾಭಿಪ್ರಾಯವುಳ್ಳವರು ಬೇರೆಯಾರೂ ಇಲ್ಲ. ಕೈಕೇಯಿಯೊಬ್ಬಳ ಅಭಿಪ್ರಾಯವೇ ಅಯೋಧ್ಯಾರಾಜಧಾನಿಯ ಅಭಿಪ್ರಾಯವಾಗಲಾರದು. ಹಾಗಾದಲ್ಲಿ ನನ್ನ ಬಾಣಪ್ರಯೋಗದಿಂದ ಈ

ನಗರಿಯನ್ನೇ ಕ್ಷಣಮಾತ್ರದಲ್ಲಿ ನಿರ್ಮಾನುಷ್ಯವನ್ನಾಗಿಸುವೆನು. ನೀನು ಜ್ಯೇಷ್ಠನಾಗಿರುವಲ್ಲಿ ಭರತನಿಗೆ ಈ ರಾಜ್ಯವಾಳಲು ಏನು ಬಾಧ್ಯತೆಯಿರವುದು? ಅವನೊಂದು ವೇಳೆ ತನ್ನ ಮಾವನ ಬೆಂಬಲದಿಂದ ಬಂದಲ್ಲಿ, ಅವನನ್ನೂ ಕೈಕೇಯಿಯನ್ನೂ ಸೆರೆಗೊಳಿಸುವೆನು. ಆ ಹೆಂಗಸಿನ ಮಾತಿಗೆ ಮರುಳಾದ ಮುದುಕನಾದ ದೊರೆಯು ಈ ನನ್ನ ಮಾತಿಗೆ ವಿರೋಧಹೇಳಿದಲ್ಲಿ ಆತನನ್ನೂ ಕೈದುಮಾಡುವೆನು.-ಕತ್ತರಿಸಿ ಒಗೆಯುವೆನು. ಶ್ರೀರಾಮಾ ನನ್ನೊಂದಿಗಿದ್ದು ರಾಜ್ಯಭಾರಮಾಡುವ ನಿನ್ನನ್ನು ವಿರೋಧಿಸುವ ಗಂಡಸಾವನಿರುವನು!' ಎಂದು ಮುಂತಾಗಿ ಗರ್ಜಿಸುತ್ತಿದ್ದನು. ಆಹಾ! ಇದು ಎಷ್ಟು ಮಟ್ಟಿನ ಭ್ರಾತೃಪ್ರೇಮವನ್ನು ಪ್ರಕಟಿಸುತ್ತಿರುವುದು!

ಆದರೆ ಶ್ರೀರಾಮಚಂದ್ರನು ಲಕ್ಷ್ಮಣನಾಡಿದ ಆ ಮಾತುಗಳನ್ನು ಒಪ್ಪಲಿಲ್ಲ.-'ತಮ್ಮಾ ಲಕ್ಷ್ಮಣಾ, ನಿನಗೆ ನನ್ನಲ್ಲಿ ಅಪಾರ ಪ್ರೇಮವಿರುವುದೆಂದು ನಾನು ಬಲ್ಲೆ. ಅಲ್ಲದೆ ನೀನು ಅಸಹಾಯ ಶೂರನೆಂಬುದನ್ನೂ, ನಿನ್ನ ಕತ್ತಿಗೆ ಎದುರಾಗಿ ಯಾವ ಶೂರನೂ ನಿಲ್ಲಲಾರನೆಂಬುದನ್ನೂ ನಾನು ಬಲ್ಲೆ. ಆದರೆ ಕೇಳು, ಲೋಕದಲ್ಲಿ ಎಲ್ಲಕ್ಕಿಂತಲೂ ಧರ್ಮವು ಶ್ರೇಷ್ಠವಾದುದು. ಸತ್ಯವು ಧರ್ಮವನ್ನು ಆಶ್ರಯಿಸಿದೆ. ನಾವು ಸರ್ವಪ್ರಯತ್ನದಿಂದಲೂ ಈ ಸತ್ಯಧರ್ಮಗಳನ್ನು ರಕ್ಷಿಸಬೇಕಾದುದು ಕರ್ತವ್ಯವು. ನಾನು ಈ ಸತ್ಯಧರ್ಮಗಳ ರಕ್ಷಣೆಗಾಗಿ ಎಂತಹ ಕಷ್ಟವನ್ನಾದರೂ ಸಹಿಸಲು ಸಿದ್ಧನಿದ್ದೇನೆ. ನನಗೆ ವನವಾಸಕ್ಕಾಗಿ ಬಂದಿರುವ ಈ ಆಜ್ಞೆಯು ಕೈಕೇಯಿಯಿಂದ ಪ್ರೇರೇಪಿಸಲ್ಪಟ್ಟುದಾದರೂ ಅದು ನಮ್ಮ ತಂದೆಯಾದ ದಶರಥನಿಂದ ಬಂದುದಾದುದರಿಂದ ಸತ್ಯಪ್ರತಿಜ್ಞನಾದ ಆತನ ಈ ಆಜ್ಞೆಯನ್ನು ನಾನು ಪಾಲಿಸಲೇಬೇಕು. ಕ್ಷಾತ್ರಧರ್ಮದ ಈ ಉಗ್ರವೃತ್ತಿಯನ್ನು ತ್ಯಜಿಸು. ನಮ್ಮ ಈ ದೇಹಗಳು ಪೂಜ್ಯನಾದ ಆ ತಂದೆಯಿಂದಲೇ ಪ್ರಾಪ್ತವಾದುವಲ್ಲವೆ? ಜನ್ಮದಾತನಾದ ಆತನನ್ನು ಬಂಧಿಸುವ ಅಥವ ಕತ್ತರಿಸಿಹಾಕುವ ಯೋಚನೆಯಾದರೂ ನಮ್ಮ ಮನಸ್ಸಿನಲ್ಲಿ ಬರುವುದು ಯುಕ್ತವೇ ಎಂದು ಯೋಚಿಸು. ಆತನ ಸತ್ಯಪ್ರತಿಜ್ಞೆಯನ್ನು ಪಾಲಿಸದಿದ್ದಲ್ಲಿ ಮಕ್ಕಳಾದ ನಾವು ಬದುಕಿದ್ದು ತಾನೇ ಸಾರ್ಥಕವೇನು? ಇದೂ ಅಲ್ಲದೆ ಒಂದು ಸಂಗತಿಯನ್ನು ಮುಖ್ಯವಾಗಿ ಗಮನಿಸು. ನನ್ನ ವನವಾಸ ಗಮನದ ಈ ಕಾರ್ಯಕ್ಕೆ

ದೈವವೇ ಪ್ರಧಾನ ಕಾರಣವೆಂದು ತಿಳಿಯುವನಾಗು. ಕೈಕೇಯಿಯು ನಿಮಿತ್ತ ಮಾತ್ರಳು. ಅವಳ ಬುದ್ಧಿಯು ದೈವಮಾಯೆಯಿಂದಲೇ ಪರಿವರ್ತಿತವಾಗಿದೆ. ಹಾಗಿಲ್ಲದಿದ್ದಲ್ಲಿ ಈವರೆಗೆ ನನ್ನನ್ನು ಅತಿಶಯ ಪ್ರೇಮದಿಂದ ನೋಡಿಕೊಂಡಿದ್ದ ಆಕೆಯು ಈಗ ನನ್ನ ರಾಜ್ಯಾಭಿಷೇಕ ಕಾಲದಲ್ಲಿ ಅದನ್ನು ತಪ್ಪಿಸಿ ವನವಾಸವನ್ನು ಕಲ್ಪಿಸಿ ನಮ್ಮನ್ನು ಹೀಗೆ ನಿರ್ಬಂಧಿಸಲು ಕಾರಣವೇನಿರುವುದು! ನನ್ನನ್ನು ಆಕೆಯು ಎಂದೂ ದ್ವೇಷಿಸಿದವಳಲ್ಲ - ದೂಷಿಸಿದವಳಲ್ಲ. ಎಂದೂ ಒಂದು ಕಟುವಚನದಿಂದಲಾದರೂ ನನ್ನನ್ನು ಕರೆದುದನ್ನು ನಾನು ಅರಿಯೆ. ಆದ್ದರಿಂದ ಈಗ ಆಕೆಯು ದೈವಪ್ರೇರಿತಳಾಗಿಯೇ ಈ ಕಾರ್ಯ ಮಾಡಿದ್ದಾಳೆಂದು ತಿಳಿದು, ಆಕೆಯಲ್ಲೂ ದ್ವೇಷವನ್ನಿಡಬೇಡ. ನಿನಗುಂಟಾಗಿರುವ ಈ ದುಃಖವನ್ನು ದೂರಮಾಡು. ಧೈರ್ಯವನ್ನು ಅವಲಂಬಿಸು' ಎಂದು ನುಡಿದನು.

ಶ್ರೀರಾಮನ ಈ ಮಾತುಗಳು ಲಕ್ಷ್ಮಣನಿಗೆ ಸಂಪೂರ್ಣ ಸಮಾಧಾನವನ್ನುಂಟುಮಾಡಲಿಲ್ಲ. ಸ್ವಲ್ಪ ಹೊತ್ತು ತಲೆಯನ್ನು ತಗ್ಗಿಸಿ ಸುಮ್ಮನಿದ್ದು ತರುವಾಯ -' ಅಣ್ಣಯ್ಯಾ, ಎಲ್ಲಕ್ಕೂ ದೈವ ದೈವ ಎಂದು ಪೌರುಷಹೀನರಾಡುವ ಮಾತುಗಳಿವು. ಲೋಕದಲ್ಲಿ ಶೂರರಾದವರು ತಮ್ಮ ಪರಾಕ್ರಮಾತಿಶಯದಿಂದ ಹಲವು ಮಹತ್ಕಾರ್ಯಗಳನ್ನು ಸಾಧಿಸುತ್ತಿರುವುದನ್ನು ನಾವು ನೋಡುತ್ತಿದ್ದೇವಲ್ಲವೆ? ಮನುಷ್ಯನು ಎಲ್ಲಕ್ಕೂ ದೈವವೇ ದಿಕ್ಕೆಂದು ಕಳಿತಿರುವುದಕ್ಕಿಂತಲೂ ತನ್ನ ಪೌರುಷಾತಿಶಯದಿಂದ ದೈವವನ್ನು ಹಿಂದಕ್ಕೆ ಒತ್ತಿ ಪ್ರಯತ್ನಮಾಡಿದಲ್ಲಿ ಒಂದುವೇಳೆ ಜಯಪ್ರಾಪ್ತವಾಗದಿದ್ದರೂ, ಅವನಿಗೆ ದುಃಖವುಂಟಾಗಲಾರದು. ಆದುದರಿಂದ ಎಲೈ ರಘುನಾಯಕಾ, ನನಗೆ ನೀನಿಂದು ಆಜ್ಞೆಯನ್ನು ಮಾತ್ರ ಕೊಡು; ದೈವವು ವಿಜಯ ಹೊಂದು ಹೊಂದುವುದೋ ಅಥವಾ ಪೌರುಷವು ಪ್ರತಾಪಶಾಲಿಯಾಗುವುದೋ ನಾನು ನೋಡಿಬಿಡುತ್ತೇನೆ. ಅಣ್ಣಯ್ಯಾ, ರಘುಕುಲದರಸರು ಏರಿದ ಸಿಂಹಾಸನವನ್ನೇರಲು ಯೋಗ್ಯನಾದ ನೀನು ಕಾಲ್ನಡೆಯಿಂದ ಅಡವಿಅಡವಿ ಸುತ್ತುತ್ತಿರುವುದನ್ನು ನಾನು ನೋಡಲಾರೆನು. ನೀನು ಇಂದು ಅನುಮತಿಯನ್ನಿತ್ತರೆ ಸಾಕು. ನಿನ್ನ ಪ್ರಾಣಕ್ಕಾಗಲೀ ಯಶಸ್ಸಿಗಾಗಲೀ ಕುಂದಕ ಉಂಟಾಗದಂತೆ ನಿನ್ನ ಶತ್ರುಗಳನ್ನೆಲ್ಲ ಧ್ವಂಸಗೊಳಿಸಿ ನೀನು ಸಿಂಹಾಸನವನ್ನೇ

ರಲು ನಡೆವ ಮಾರ್ಗವನ್ನು ಸುಗಮಗೊಳಿಸುವೆನು. ನನ್ನ ಈ ಪ್ರಾರ್ಥನೆಯನ್ನು ಮಾನಸಿಕ ಮಾಡಬೇಡ' ಎಂದು ಕಣ್ಣೀರಿಡುತ್ತ ಪ್ರಾರ್ಥಿಸಿದನು.

ತನ್ನ ತಮ್ಮನು ಅಗಾಧ ಭ್ರಾತೃಪ್ರೇಮಪಾಶಬದ್ಧನಾಗಿ, ತನ್ನ ಮೇಲ್ಮೆಯನ್ನು ಕೋರಿ ಹೇಳುತ್ತಿರುವ ಮಾತುಗಳನ್ನು ಕೇಳಿ ಶ್ರೀರಾಮನ ಕಣ್ಣುಗಳಲ್ಲಿ ಆನಂದಬಾಷ್ಪಗಳುದುರುತ್ತಿರಲು, ಆತನ ಕೈಗಳೆರಡನ್ನೂ ತನ್ನ ಕೈಗಳಲ್ಲಿ ಹಿಡಿದುಕೊಂಡು -' ತಮ್ಮಾ ಲಕ್ಷ್ಮಣಾ, ನೀನು ಹೇಳುವುದೆಲ್ಲವೂ ನಿಶ್ಚಯ. ಆದರೆ ಈಗಿನ ಸಂದರ್ಭವನ್ನು ಕುರಿತು ಯೋಚಿಸು. ಮಕ್ಕಳಾದ ನಾವು ತಂದೆತಾಯಿಗಳ ಆಜ್ಞೆಯನ್ನು ಪಾಲಿಸತಕ್ಕದು ಧರ್ಮವಾಗಿದೆ. ಅದಕ್ಕಿಂತಲೂ ಹೆಚ್ಚಿನ ಧರ್ಮವೂ-ಕರ್ತವ್ಯವೂ ಮತ್ತೊಂದಿಲ್ಲ. ಅದಕ್ಕೆ ನೀನು ಪ್ರತಿ ಹೇಳಬೇಡ. ನಾನೀಗ ಕಷ್ಟ ಸಹನ ಮಾಡಲು ಒಪ್ಪದಿದ್ದರೆ ನಮ್ಮ ತಂದೆಯು ತನ್ನ ಪ್ರತಿಜ್ಞೆಯನ್ನು ಉಳಿಸಿಕೊಳ್ಳಲಾರನು. ದಶದಿಕ್ಕುಗಳಲ್ಲೂ ರಥವನ್ನು ನಡೆಸಿ, ಅಭಿಮಾನಶಾಲಿಯೆನ್ನಿಸಿಕೊಂಡ ನಮ್ಮ ಪೂಜ್ಯ ಪಿತೃವು ತನ್ನ ಪ್ರತಿಜ್ಞಾ ಭಂಗಮಾಡಿಕೊಳ್ಳಲು ನಾವೇ ಕಾರಣರಾದಲ್ಲಿ ಅಂತಹ ನಾವು ಮಕ್ಕಳಾಗಿದ್ದು ತಾನೇ ಪ್ರಯೋಜನವೇನು ? ಆದುದರಿಂದ - ತಮ್ಮಾ ಲಕ್ಷ್ಮಣಾ, ನಮ್ಮ ತಂದೆಯನ್ನು ಸತ್ಯಪ್ರತಿಜ್ಞನನ್ನಾಗಿಸಲು ಎಂತಹ ಕಷ್ಟವನ್ನಾದರೂ ಅನುಭವಿಸಲು ನಾನು ಸಿದ್ಧನಾಗಿರುವೆನು. ನನ್ನ ಈ ಮಾರ್ಗವನ್ನು ಪ್ರತಿಬಂಧಗೊಳಿಸಬೇಡ' ಎಂದು ನುಡಿದನು.

ಶ್ರೀರಾಮನಾಡಿದ ಮಾತುಗಳಿಗೆ ಏನು ಪ್ರತಿಹೇಳಬೇಕೆಂದು ತೋರಲಿಲ್ಲ. ಲಕ್ಷ್ಮಣನ ಮನಸ್ಸಿನ ಕ್ರೋಧಾಗ್ನಿಯು ಇನ್ನೂ ಶಾಂತಗೊಂಡಿರಲಿಲ್ಲ. ಆತನ ಮುಖಭಾವದಿಂದ ಮನಸ್ಥಿತಿಯನ್ನು ಗ್ರಹಿಸಿದ ರಾಮಚಂದ್ರನು -' ಮಗೂ ಲಕ್ಷ್ಮಣಾ, ನಾವು ಕಣ್ಣಿನಿಂದ ನೋಡುತ್ತಿರುವ ರಾಜ್ಯೈಶ್ವರ್ಯ ಭೋಗ ಮುಂತಾದುವೆಲ್ಲವೂ ಶಾಶ್ವತವಾಗಿದ್ದಲ್ಲಿ ಒಂದುವೇಳೆ ನೀನು ಹೇಳಿದಂತೆ ಸತ್ಯಕ್ಕೆ ಹಾನಿ ತಂದುಕೊಂಡಾದರೂ ಇವುಗಳನ್ನು ಪಡೆಯೋಣವೆನ್ನಬಹುದು. ಆದರೆ ನೋಡು, ಇವೆಲ್ಲವೂ ಮಿಂಚಿನಂತೆ ಅತಿ ಚಂಚಲವಾದುವು. ಇವುಗಳೇ ಶಾಶ್ವತವೆಂದು ತಿಳಿದು, ಅವುಗಳನ್ನು ಗಳಿ

ಸಲೆತ್ನಿಸುವುದು ಮನುಷ್ಯನಲ್ಲಿರುವ ರಾಜಸಿಕವಾದ ಕ್ರೋಧದ ಕಾರ್ಯವು. ಈ ಕ್ರೋಧವೇ ಲೋಕದಲ್ಲಿ ಸಕಲ ವಿಧವಾದ ಮಾನಸಿಕ ಸಂತಾಪಕ್ಕೂ ಸಂಸಾರದಲ್ಲಿನ ಸಕಲವಿಧ ಬಂಧನಗಳಿಗೂ ಮೂಲಕಾರಣವಾಗಿರುವುದು. ಈ ಕ್ರೋಧವೇ ಧರ್ಮವನ್ನು ನಾಶಗೊಳಿಸತಕ್ಕುದು. ಆದುದರಿಂದ ಈ ಕ್ರೋಧವನ್ನು ತ್ಯಾಗಮಾಡಿ ಶಾಂತಿಯನ್ನು ಧಾರಣಮಾಡು. ಆಗ ನಿನಗೆ ಲೋಕದಲ್ಲಿ ಶತ್ರುಗಳೆಂಬುವರೇ ಇರಲಾರರು' ಎಂದು ನುಡಿದು ಅವನನ್ನು ಸಮಾಧಾನಗೊಳಿಸಿದನು.

ತನಗೆ ಪರಮಪ್ರೇಮಾಸ್ಪದನಾದ ಶ್ರೀರಾಮನು ತಂದೆಯ ಮಾತನ್ನು ಪಾಲಿಸಲು ವನವಾಸಕ್ಕಾಗಿ ಹೊರಡುವುದೇ ನಿಶ್ಚಯವೆಂದು ಹೇಳಿದಮೇಲೆ, ಲಕ್ಷ್ಮಣನು ತನ್ನ ಆವರೆಗಿನ ಅಭಿಪ್ರಾಯವನ್ನು ಸಂಪೂರ್ಣವಾಗಿ ಬದಲಾಯಿಸಿಕೊಂಡನು. ರಾಮನ ಮುಂದೆ ನಿಂತು, ಎರಡು ಕೈಗಳನ್ನೂ ಜೋಡಿಸಿಕೊಂಡು, -' ಅಣ್ಣಯ್ಯಾ ಶ್ರೀರಾಮಚಂದ್ರಾ, ನಾನು ನಿನ್ನ ಸಹಚರನೆಂದೂ, ನಿನ್ನನ್ನು ಯಾವಾಗಲೂ ನೆಳಲಿನಂತೆ ಅನುಸರಿಸತಕ್ಕವನೆಂದೂ ನೀನು ಹೇಳುತ್ತಿರಲಿಲ್ಲವೆ? ಇಂದು ನನ್ನನ್ನು ಬಿಟ್ಟು ವನಕ್ಕೆ ಹೋಗಲು ಇಚ್ಛಿಸಿದೆಯಾ?' ಎಂದು ಅಂಗಲಾಚಿಕೊಂಡನು ಲಕ್ಷ್ಮಣನಾಡಿದ ಆ ಮಾತುಗಳನ್ನು ಕೇಳಿದ ರಾಘವನು ಅವನನ್ನು ಬಾಚಿ ತಬ್ಬಿಕೊಂಡು, ಆನಂದಬಾಷ್ಪಗಳುದುರುತ್ತಿರಲು-'ತಮ್ಮ ಲಕ್ಷ್ಮಣಾ, ನಿನ್ನನ್ನು ಬಿಟ್ಟು ನನಗೆ ಲೋಕದ ಯಾವ ಸುಖಭೋಗವಾಗಲಿ, ಐಶ್ವರ್ಯವಾಗಲಿ, ಸ್ವರ್ಗವಾಗಲಿ, ಮೋಕ್ಷವಾಗಲಿ ಪ್ರಿಯವಾಗಲಾರದು. ಆದರೆ ಯೋಚಿಸು, ನಾವಿಬ್ಬರೂ ಈಗ ಕಾಡಿಗೆ ಹೊರಟು ಹೋದಲ್ಲಿ ಇಲ್ಲಿ ದುಃಖಿತನಾಗಿಯೂ ಅಸಹಾಯನಾಗಿಯೂ ವ್ಯಥೆಪಡುತ್ತಿರುವ ತಂದೆಯನ್ನು ಸಂತೈಸುವರಾರು ? ಆತನ ಯೋಗಕ್ಷೇಮವನ್ನು ನೋಡಿಕೊಳ್ಳುವರಾರು ?' ಎಂದನು.

ಆದರೆ ಲಕ್ಷ್ಮಣನನ್ನು ಈ ಕಾರಣದಿಂದ ಅಯೋಧ್ಯೆಯಲ್ಲಿ ನಿಲ್ಲಗೊಡಿಸಲು ಸಾಧ್ಯವಾಗಲಿಲ್ಲ. ಕೊನೆಗೆ ಶ್ರೀರಾಮನು ಆತನನ್ನೂ ತನ್ನೊಂದಿಗೆ ವನಕ್ಕೆ ಕರೆದೊಯ್ಯಲು ಒಪ್ಪಿದನು. ತರುವಾಯ ಲಕ್ಷ್ಮಣನು ಹೃಷ್ಟಮಾನಸನಾಗಿ, ತನ್ನ ತಾಯಿಯಾದ ಸುಮಿತ್ರೆಯ ಬಳಿಗೆ ಹೋಗಿ ವಂದಿಸಿ, ಆವರೆಗೆ ನಡೆದ ವೃತ್ತಾಂತವನ್ನೆಲ್ಲ ಸೂಕ್ಷ್ಮವಾಗಿ ತಿಳಿಸಿ, -' ತಾಯೇ, ನಾನು ಶ್ರೀ

ಸೀತಾರಾಮರೊಂದಿಗೆ ಕಾಡಿಗೆ ಹೋಗುವುದನ್ನು ನಿಶ್ಚಯಮಾಡಿದ್ದೇನೆ. ನೀನು ದಯಮಾಡಿ ಅಪ್ಪಣೆ ಕೊಡಬೇಕು' ಎಂದು ಪ್ರಾರ್ಥಿಸಿದನು. ಆ ಮಾತನ್ನು ಕೇಳಿದ ಆ ಸಾಧ್ವೀಮಣಿಯು ಪ್ರತಿಮಾತನ್ನಾಡದೆ, ಒಪ್ಪಿ ಅಪ್ಪಣೆ ಕೊಟ್ಟಳು. ಮಾತ್ರವಲ್ಲ.—

*'ಮಗನೇ ಲಕ್ಷ್ಮಣಾ,ಸಂದೇಹಗೊಳ್ಳಬೇಡ, ನಿಮ್ಮಣ್ಣನಾದ ರಾಮನನ್ನು ಸಾಕ್ಷಾತ್ತಂದೆಯಾದ ದಶರಥನನ್ನಾಗಿ ತಿಳಿ. ಸೀತಾದೇವಿಯನ್ನೇ ನಾನೆಂದು ತಿಳಿ. ಅಡವಿಯನ್ನು ಅಯೋಧ್ಯೆಯನ್ನಾಗಿ ತಿಳಿ. ಮಗನೇ ಸಂತೋಷದಿಂದ ಹೋಗಿಬಾ!' ಎಂದು ಆಶ್ವಾಸನ ಕೊಟ್ಟಳು.

ಇನ್ನು ಮಿಕ್ಕವಳೆಂದರೆ ಲಕ್ಷ್ಮಣನ ಪತ್ನಿಯಾದ ಊರ್ಮಿಳಾದೇವಿ. ಲಕ್ಷ್ಮಣನು ಆಕೆಯಿಂದಲೂ ಅನುಮತಿ ಪಡೆದು ಹೊರಟನೇ ಎಂಬ ಸಂಗತಿಯನ್ನು ರಾಮಾಯಣದಲ್ಲಿ ಕವಿಯು ಹೇಳಿಲ್ಲ. ಆದರೂ, ಲಕ್ಷ್ಮಣನ ಕಾರ್ಯಕ್ಕೆ ಆಕೆಯ ಸಮ್ಮತಿಯೂ ಇತ್ತೆಂದು ನಾವು ಊಹಿಸಬಹುದು. ಲೋಕದ ಪ್ರತಿವ್ರತಾಜನಕ್ಕೆ ಗುರುಸ್ಥಾನೀಯಳು ಸೀತಾದೇವಿ ಎಂಬ ವಿಷಯದಲ್ಲಿ ಸಂದೇಹವಿಲ್ಲವಷ್ಟೆ! ಆಕೆಯ ತಂಗಿಯಾದ ಊರ್ಮಿಳಾದೇವಿಯೂ ಪಾತಿವ್ರತ್ಯ ಧರ್ಮರಕ್ಷಣೆಯಲ್ಲಿ ಆಕೆಗೇನೂ ಕಡಿಮೆಯಾದವಳಲ್ಲ. ಶ್ರೀರಾಮನು ತನ್ನ ವನವಾಸ ಪ್ರಯಾಣ ವಿಚಾರವನ್ನು ಸೀತಾದೇವಿಗೆ ತಿಳಿಸಲು ಆಕೆಯ ಅಂತಃಪುರಕ್ಕೆ ಹೋದಾಗ, ಆಕೆಯು ತನ್ನನ್ನು ಒಂದಿಗೇ ವನಕ್ಕೆ ಕರೆದೊಯ್ಯಬೇಕೆಂದೂ ಇಲ್ಲದಿದ್ದಲ್ಲಿ ತಾನು ಪ್ರಾಣತ್ಯಾಗ ಮಾಡುವೆನೆಂದೂ ಶ್ರೀರಾಮನನ್ನು ನಿರ್ಬಂಧಗೊಳಿಸಿದಳು. ಆದರೆ ಊರ್ಮಿಳಾದೇವಿಯು ತನ್ನ ಭರ್ತನಾದ ಲಕ್ಷ್ಮಣಸ್ವಾಮಿಯನ್ನು ಹಾಗೆ ನಿರ್ಬಂಧಗೊಳಿಸಿದಂತೆ ಕಂಡು ಬಂದಿಲ್ಲ. ಹದಿನಾಲ್ಕು ವರ್ಷಕಾಲ ಅಗಲಿ ಹೋಗಲು ಸಿದ್ಧನಾದ ಲಕ್ಷ್ಮಣನು, ತನ್ನ ಪತ್ನಿಗೆ ಹೇಳದೆಯೇ, ಆಕೆಯ ಅನುಮತಿಯನ್ನು ಪಡೆಯದೆಯೇ ಹೊರಟನೆಂದು ಊಹಿಸಲು ಸಾಧ್ಯವಿಲ್ಲ. ರಾಮಾಯಣದಲ್ಲಾದರೋ ಲಕ್ಷ್ಮಣನು ಊರ್ಮಿಳಾದೇವಿಯನ್ನು ಕಂಡು ತನ್ನ ವನಪ್ರಯಾಣ ವಿಚಾರವನ್ನು

---

*ರಾಮಂ ದಶರಥಂ ವಿದ್ಧಿ ಮಾಂ ವಿದ್ಧಿ ಜನಕಾತ್ಮಜಾವಮ್
ಅಯೋಧ್ಯಾಂ ಅಟವೀಂ ವಿದ್ಧಿ ಗಚ್ಛ ತಾತ ಯಥಾಸುಖಂ

ಆಕೆಗೆ ತಿಳಿಸಿ ಅನುಮತಿಯನ್ನು ಪಡೆದಂತೆ ಹೇಳಿಲ್ಲವಾದರೂ ಲಕ್ಷ್ಮಣನು ಆಕೆಗೂ ತಿಳಿಸದೆ ಹೊರಟಿರಲಾರನು. ಆಗ ಆಕೆಯು ಸೀತಾದೇವಿಯಂತೆ ತನ್ನನ್ನೂ ವನಕ್ಕೆ ಕರೆದೊಯ್ಯಬೇಕೆಂದೂ, ಹಾಗಿಲ್ಲದಿದ್ದಲ್ಲಿ ತಾನು ಪ್ರಾಣ ತ್ಯಾಗ ಮಾಡುವೆನೆಂದೂ ಹೇಳಿದ್ದಲ್ಲಿ, ಆ ನಿರ್ಬಂಧವನ್ನು ನಿವಾರಣೆಗೊಳಿಸಿ ಕೊಳ್ಳದೆ ಲಕ್ಷ್ಮಣನು ನಿಶ್ಚಿಂತೆಯಿಂದ ಹೊರಡಲು ಸಾಧ್ಯವಿರುತ್ತಿರಲಿಲ್ಲ. ಆದುದರಿಂದ ಸುಮಿತ್ರಾದೇವಿಯಂತೆ ಊರ್ಮಿಳೆಯಾದರೂ, ಲಕ್ಷ್ಮಣಸ್ವಾಮಿಯ ಇಷ್ಟವನ್ನು ಅನುಸರಿಸಿ, ಆತನ ವನವಾಸಕ್ಕೆ ದೃಢಮನಸ್ಸಿನಿಂದ ಸಮ್ಮತಿಕೊಟ್ಟಿರಬಹುದೆನ್ನಲು ಏನೂ ಸಂಶಯವಿಲ್ಲ.

ಇಲ್ಲಿ ಇದಕ್ಕಿಂತಲೂ ಹೆಚ್ಚಾಗಿ ಗಮನಿಸತಕ್ಕ ಮತ್ತೊಂದಂಶವುಂಟು. ಶ್ರೀರಾಮನ ಅವತಾರವೇ ರಾವಣ ವಧಾಕಾರ್ಯಕ್ಕಾಗಿ ಎಂಬುದು ನಿಶ್ಚಯ ವಾಗಿರುವಲ್ಲಿ ಆತನಿಂದ ನಡೆಯಿಸಲ್ಪಡುವ ಕಾರ್ಯಗಳೆಲ್ಲವೂ ಆ ಕಾರ್ಯ ಸಾಧನೆಗೆ ಸಹಾಯಕವಾಗಿಯೇ ನಡೆಯಬೇಕಲ್ಲವೆ? ರಾವಣವಧೆಗೆ ಸೀತಾ ಪಹರಣವಾಗಬೇಕಾದುದೂ ಅದಕ್ಕಾಗಿ ಸೀತಾದೇವಿಯು ಶ್ರೀರಾಮನೊಂ ದಿಗೆ ವನಕ್ಕೆ ಹೊರಡಬೇಕಾದುದೂ ಆವಶ್ಯಕವಾಗಿದ್ದಿತು. ಆದರೆ ಸೀತೆ ಯಂತೆಯೇ, ಊರ್ಮಿಳೆಯೂ ವನಕ್ಕೆ ಹೊರಟಿದ್ದಲ್ಲಿ ಆ ಇಬ್ಬರು ಸ್ತ್ರೀಯರ ರಕ್ಷಣೆಯೂ ಶ್ರೀರಾಮಾದಿಗಳಿಗೆ ಬಹು ಪ್ರಯಾಸಕರವಾಗಿರುತ್ತಿದ್ದಿತು. ಮಾತ್ರವಲ್ಲ - ಲಕ್ಷ್ಮಣನು ಶ್ರೀಸೀತಾರಾಮರ ದಾಸಭೂತನಾಗಿ ಕೇವಲ ಅವರ ಸೇವೆಗೆಂದೇ ಹೊರಟುದರಿಂದ, ಸ್ವಾಮಿಯ ರಾಣಿಯೊಂದಿಗೆ ದಾಸ ಪತ್ನಿಯೂ ಹೊರಡುವುದು ಸಮಂಜಸವೆನ್ನಿಸಲಾರದು ಊರ್ಮಿಳೆಯೂ ವನದಲ್ಲಿ ಅವರಿಗೆ ಭಾರವಾಗಿದ್ದಲ್ಲಿ, ರಾವಣ ವಧಾಕಾರ್ಯವು ನಿರ್ವಿಘ್ನ ವಾಗಿ ನಡೆಯುತ್ತಿದ್ದಿತೋ ಇಲ್ಲವೋ ಊಹಿಸಲು ಶಕ್ಯವಿಲ್ಲ. ಅದೆಂತಾದರೂ ಇರಲಿ, ಊರ್ಮಿಳಾದೇವಿಯು ತನ್ನ ಸ್ವಾಮಿಯನ್ನು ಹದಿನಾಲ್ಕು ವರ್ಷಕಾಲ ಅಗಲಿ ವ್ರತಾಚರಣಶೀಲಳಾಗಿರಲು ನಿರ್ಧರಿಸಿ, ರಾಜಧಾನಿಯಲ್ಲೇ ನಿಂತುದು ಆಕೆಯ ಅಗಾಧವಾದ - ಅನುಪಮವಾದ - ಅದ್ವಿತೀಯ ಪಾತಿವ್ರತ್ಯ ಪ್ರದ ರ್ಶಕವಾದ ಮಹತ್ಕಾರ್ಯವೆನ್ನಲು ಏನೂ ಸಂಶಯವಿಲ್ಲ. ಆಕೆಯ ಈ ತ್ಯಾಗವು ಅನುಪಮವಾದುದೆನ್ನಲು ಏನೂ ಅಡ್ಡಿಯಿಲ್ಲ. ಹೀಗೆ ಸೀತೆ, ಲಕ್ಷ್ಮಣ, ಕೈಕೇಯಿ, ಸುಮಿತ್ರಾದೇವಿ, ಊರ್ಮಿಳಾ ಮುಂತಾದವರೆಲ್ಲರೂ, ಶ್ರೀ

ರಾಮನ ಅವತಾರಕಾರ್ಯಕ್ಕೆ ಸಹಾಯಕರಾಗಿ, ದೈವಪ್ರೇರಿತರೋ ಎಂ ಬಂತೆ, ತಮ್ಮ ತಮ್ಮ ಪಾತ್ರಗಳಿಂದ ಆಗಬೇಕಾದ ಕಾರ್ಯವನ್ನು ಈ ಜಗ ನ್ನಾಟಕದಲ್ಲಿ ಉತ್ತಮರೀತಿಯಿಂದ ಅಭಿನಯಿಸಿದ್ದಾರಾದರೂ, ಮಾನವ ಜನ್ಮಧಾರಣಮಾಡಿದ ಅವರ ತ್ಯಾಗಶೀಲ ಮನೋವೃತ್ತಿಯು ಅಭಿನಂದ ನೀಯವಿದೆ.

ಹೀಗೆ ಶ್ರೀರಾಮಚಂದ್ರನು ಸೀತಾಲಕ್ಷ್ಮಣರೊಂದಿಗೆ ಮುನಿವೇಷ ಧಾರಿಯಾಗಿ ವನವಾಸಕ್ಕಾಗಿ ಪ್ರಯಾಣಮಾಡಿದನು.



ಅಧ್ಯಾಯ ೪ 'ರಣರಂಗದಲ್ಲಿ—'

ದಶರಥರಾಜನ ಆಜ್ಞೆಯನ್ನನುಸರಿಸಿ, ಮಂತ್ರಿಯಾದ ಸುಮಂತ್ರನು ರಥವನ್ನು ಸಿದ್ಧಗೊಳಿಸಿಕೊಂಡು ಅದರಮೇಲೆ ಶ್ರೀಸೀತಾರಾಮ ಲಕ್ಷ್ಮಣ ರನ್ನು ಕೂರಿಸಿಕೊಂಡು ಕರೆದೊಯ್ದನು. ಮಾರ್ಗಮಧ್ಯದಲ್ಲಿ ದೋಣಿಯಲ್ಲಿ ಗಂಗಾನದಿಯನ್ನು ದಾಟಿ, ತರುವಾಯ ಭರದ್ವಾಜ ಮಹರ್ಷಿಗಳನ್ನು ಕಂಡು, ಅವರಿಂದ ಅರಣ್ಯದಲ್ಲಿ ತಾವು ವಾಸಮಾಡಲು ಯೋಗ್ಯವಾದ ಸ್ಥಳವಾವು ದೆಂದು ಕೇಳಿ ರಾಮಾದಿಗಳು ಮುಂದರಿದರು. ಹೀಗೆ ವನವಾಸದಲ್ಲಿದ್ದಾಗ ಒಂದು ದಿನ ಮಾರ್ಗಾಯಾಸದಿಂದ ಬಳಲಿ ಸೀತಾರಾಮರು ಒಂದು ಮರ ದಡಿಗೆ ಹೋಗಲು, ಒಡನೆ ಭಂಟನಾಗಿ ಜೊತೆಯಲ್ಲೇ ಇದ್ದ ಲಕ್ಷ್ಮಣನು ಅಲ್ಲಿಯ ಕಲ್ಲುಮುಳ್ಳುಗಳನ್ನೆಲ್ಲ ತೆಗೆದು ನೆಲವನ್ನು ಶುದ್ಧಿಪಡಿಸಿ, ಎಳೆಯ ಚಿಗುರುಗಳನ್ನು ತಂದು ಆಸನವನ್ನು ಸಿದ್ಧಗೊಳಿಸಿಕೊಟ್ಟನು. ಹಾಗೆ ಸಿದ್ಧ ವಾದ ಆಸನದಮೇಲೆ ಸುಖವಾಗಿ ಕುಳಿತ ಶ್ರೀರಾಮನು ಲಕ್ಷ್ಮಣನನ್ನು ನೋಡಿ- 'ತಮ್ಮಾ ಲಕ್ಷ್ಮಣಾ, ಸುಕುಮಾರನಾದ ನೀನು ನಮಗಾಗಿ ರಾತ್ರಿ ಹಗಲುಗಳೆನ್ನದೆ, ಬಿಸಿಲು ಮಳೆಗಾಳಿಯೆನ್ನದೆ ಎಷ್ಟು ಶ್ರಮಪಡುತ್ತಿರುವೆ ಯಲ್ಲಾ! ನೀನು ಹಿಂದಿರುಗಿ ರಾಜಧಾನಿಗೆ ಹೋಗಿ ನಿನ್ನ ಹೆಂಡತಿಯೊಂದಿಗೂ ತಾಯಿಯೊಂದಿಗೂ ಸುಖವಾಗಿರಲಾಗದೇ! ನಾವು ನಮ್ಮ ಕರ್ಮಫಲವಾಗಿ

ದೊರೆತ ಈ ಕಷ್ಟವನ್ನು ಭೋಗಿಸಿ ಹದಿನಾಲ್ಕುವರ್ಷಗಳು ಕಳೆದ ತರುವಾಯ ಬಂದು ಸೇರುತ್ತೇವೆ' ಎಂದನು.

ಆ ಮಾತನ್ನು ಕೇಳಿದ ಲಕ್ಷ್ಮಣನು—
*'ಅಣ್ಣಯ್ಯಾ ಏನು ಮಾತನ್ನು ಹೇಳುತ್ತಿರುವೆ! ನಾನಾಗಲೀ ಸೀತೆಯಾಗಲೀ ನಿನ್ನನ್ನು ಬಿಟ್ಟು ನಿಮಿಷಮಾತ್ರವಾದರೂ ಜೀವಿಸಬಲ್ಲೆವೆಂದು ತಿಳಿದಿದ್ದೀಯಾ! ನೀರಿನಿಂದ ಹೊರಕ್ಕೆ ತೆಗೆದ ಮೀನು ಹೇಗೆ ಬದುಕಲಾರದೋ ಹಾಗೆಯೇ ನಾವೂ ಸಹ ನಿನ್ನನ್ನುಳಿದು ಬದುಕಲಾರೆವೆಂದು ತಿಳಿ. ನನ್ನ ಹೊರತು ನನಗೆ ತಾಯಿ, ತಂದೆ, ಸೋದರನಾದ ಶತ್ರುಘ್ನ, ಹೆಚ್ಚೇನು ಸ್ವರ್ಗವೂ ಬೇಕೆನ್ನಿಸುವುದಿಲ್ಲವೆಂದು ಖಂಡಿತವಾಗಿ ತಿಳಿದಿರುವನಾಗು. ಇನ್ನು ಮೇಲೆ ನಮ್ಮನ್ನು ಬಿಟ್ಟು ಅಯೋಧ್ಯೆಗೆ ಹೋಗಿ ಸುಖವಾಗಿರೆಂದು ಮಾತ್ರ ನನಗೆ ಹೇಳಬೇಡ. ನಾನು ಆ ಮಾತುಗಳನ್ನು ಕೇಳಿ ಸಹಿಸಲಾರೆನು' ಎಂದು ನುಡಿದು ನಮಸ್ಕರಿಸಿದನು. ತನ್ನ ತಮ್ಮನ ಆ ಅನುಪಮ ಭ್ರಾತೃಪ್ರೇಮವನ್ನು ಕಂಡು ಶ್ರೀರಾಮನಿಗೆ ಪರಮಾಶ್ಚರ್ಯವಾಯಿತು.

ಮತ್ತೊಮ್ಮೆ ಕಾಡಿನಲ್ಲಿ ರಾತ್ರಿಯಾಗಲು ಲಕ್ಷ್ಮಣನು ಹುಲ್ಲು ಮತ್ತು ಚಿಗುರೆಲೆಗಳಿಂದ ಹಾಸಿಗೆಯನ್ನು ಸಿದ್ಧಗೊಳಿಸಿಕೊಟ್ಟಿರಲು ಸೀತಾರಾಮರು, ಆ ಹಾಸಿಗೆಯುಮೇಲೆ ಮಲಗಿದ್ದರು. ಹೊರಗಡೆಯಲ್ಲಿ ಲಕ್ಷ್ಮಣನು ಆಯುಧಹಸ್ತನಾಗಿ ಕಾವಲಿದ್ದನು. ಆಗ ಗುಹನು ಲಕ್ಷ್ಮಣಸ್ವಾಮಿಯನ್ನು ಕುರಿತು -'ಪ್ರಭೋ ನಿಮಗೆ ಜಾಗರವಿರುವ ಅಭ್ಯಾಸವಿರಲಾರದು. ದಯವಿಟ್ಟು ಮಲಗಿಕೊಳ್ಳೋಣವಾಗಲಿ. ನಾನು ನಿಮ್ಮ ಕೆಲಸಮಾಡುವೆನು. ಎಚ್ಚರವಿದ್ದು ಕಾವಲುಗಾರನಾಗಿರುವೆನು' ಎಂದು ನುಡಿದನು. ಅದನ್ನು ಕೇಳಿ ಲಕ್ಷ್ಮಣನು—

---

*ನ ಚ ಸೀತಾ ತ್ವಯಾ ಹೀನಾ ನ ಚಾಹಮಪಿ ರಾಘವ।
ಮುಹೂರ್ತಮಪಿ ಜೀವಾವೋ ಜಲಾನ್ಮತ್ಸ್ಯಾವಿವೋದ್ಧೃತೌ॥
ನ ಹಿ ತಾತಂ ನ ಶತ್ರುಘ್ನಂ ನ ಸುಮಿತ್ರಾಂ ಪರನ್ತಪ।
ದ್ರಷ್ಟುಮಿಚ್ಛೇಯ ಮದ್ಯಾಹಂ ಸ್ವರ್ಗಂ ಚಾಪಿ ತ್ವಯಾ ವಿನಾ॥

*ಮಿತ್ರ ಗುಹಾ, ಏನೆಂದು ಹೇಳಿದೆ. ಸಾರ್ವಭೌಮನಾದ ದಶರಥ ನಂದನ ಶ್ರೀರಾಮನು ಧರ್ಮಪತ್ನಿ ಸೀತಾದೇವಿಯೊಂದಿಗೆ, ನೆಲದಮೇಲೆ ಮಲಗಿರುವಲ್ಲಿ, ನನಗೆ ಹೇಗೆ ತಾನೇ ನಿದ್ರೆಬಂದೀತು? ನಾನು ಹೇಗೆ ತಾನೇ ಸುಖವಾಗಿ ಮಲಗಿಕೊಳ್ಳಬಲ್ಲೆನು' ಎಂದು ನಿಟ್ಟುಸಿರಿಟ್ಟು ದುಃಖಿಸಿದನು. ಲಕ್ಷ್ಮಣನ ಶ್ರೀರಾಮ ಭಕ್ತಿಯು ಅಂಥದು!

ಚಿತ್ರಕೂಟದಲ್ಲಿ ಶ್ರೀರಾಮನು ವಾಸಿಸಿದ್ದಾಗ ಲಕ್ಷ್ಮಣನು ಸೀತಾ ರಾಮರಿಗೆ ಅನುಪಮ ಸೇವೆಮಾಡಿದನು. ಮಣ್ಣಿನ ಗೋಡೆಯನ್ನು ಕಟ್ಟಿ, ಅದರಮೇಲೆ ಒಣಗಿದ ಮರದ ದೂಲಗಳನ್ನು ತಂದಿಟ್ಟುಕಟ್ಟಿ, ಬಿದಿರು ಗಳನ್ನು ತೆಂದು ಜೋಡಿಸಿ, ತರಗೆಲೆಗಳನ್ನು ತಂದು ಹೊದಿಸಿ ಒಂದು ಸಾಧಾ ರಣ ಮನೆಯನ್ನು ಸಿದ್ಧಗೊಳಿಸಿಟ್ಟನು. ಗುಡಿಸಿಲಿನಂತಿದ್ದ ಆ ಚಿಕ್ಕ ಮನೆ ಯೊಳಗೆ ಶ್ರೀರಾಮನು ಮುಗುಳುನಗೆಯಿಂದ ಪ್ರವೇಶಿಸಿ,-'ಲಕ್ಷ್ಮಣಾ, ನೀನು ಕಟ್ಟಿದ ಈ ಮನೆಯಲ್ಲಿ ವಾಸಿಸಲು, ನನಗೆ ಅಯೋಧ್ಯೆಯಲ್ಲಿದ್ದ ನಮ್ಮ ಅರ ಮನೆಯಲ್ಲಿ ವಾಸಿಸುವುದಕ್ಕಿಂತಲೂ ಹೆಚ್ಚು ಆನಂದವಾಗುತ್ತದೆ' ಎಂದು ನುಡಿದು ಅವನಿಗೆ ಸಂತೋಷವನ್ನುಂಟುಮಾಡಿದನು. ಲಕ್ಷ್ಮಣನು ಗುದ್ದಲಿ ಪಿಕಾಸಿಗಳನ್ನು ಹಿಡಿದು ಕಾಡಿಗೆ ನಡೆದು ಕಂದಮೂಲಾದಿಗಳನ್ನು ತರುವನು. ವಿವಿಧ ಫಲಗಳನ್ನೂ ಪುಷ್ಪಗಳನ್ನೂ ಜೇನುತುಪ್ಪವನ್ನೂ ತರುವನು. ಹೋ ಮಕ್ಕೆಬೇಕಾದ ಸಾಮಗ್ರಿಗಳನ್ನು ಸಂಗ್ರಹಿಸುವನು. ಪ್ರಯಾಣ ಹೊರಟಾಗ್ಗೆ ಧನುರ್ಬಾಣ ಮುಂತಾದ ಆಯುಧಗಳನ್ನೂ ಸೀತಾದೇವಿಯ ವಸ್ತ್ರಾದಿಗಳ ಮೂಟೆಯನ್ನೂ ಹೊರುವನು. ನೀರನ್ನು ಹೊತ್ತುತರುವನು. ಬೇಕೆಂದಲ್ಲಿ ಆಸ ನಾದಿಗಳನ್ನೂ ಹುಲ್ಲು ಮತ್ತು ಚಿಗುರುಗಳ ಹಾಸಿಗೆಯನ್ನೂ ಸಿದ್ಧಗೊಳಿಸುವನು. ರಾತ್ರಿಯಲ್ಲಿ ದುಷ್ಟಮೃಗಗಳ ಬಾಧೆಯುಂಟಾಗದಂತೆ ಆಶ್ರಮದ ಬಳಿ ಉರಿ ಹಾಕಿರಲು ಬೇಕಾದಷ್ಟು ಒಣಗಿದ ಕಟ್ಟಿಗೆಗಳನ್ನು ಕಾಡಿನಿಂದ ಹೊತ್ತುತಂದು ಇಡುವನು. ಸೀತಾರಾಮರು ಪರ್ಣಶಾಲೆಯೊಳಗೆ ಮಲಗಿ ನಿದ್ರಿಸುತ್ತಿದ್ದಾಗ ಆಯುಧಗಳನ್ನು ಧರಿಸಿ ಅವರಿಗೆ ದುಷ್ಟರಾಕ್ಷಸರ ಮತ್ತು ಕಾಡುಮೃಗಗಳ

*ಕಥಂ ದಾಶರಥೌ ಭೂಮೌ ಶಯನೇ ಸಹ ಸೀತಯಾ ।
ಶಕ್ಯಾ ನಿದ್ರಾ ಮಯಾ ಲಬ್ಧುಂ ಜೀವಿತಾನಿ ಸುಖಾನಿ ವಾ ॥

ಬಾಧೆಯುಂಟಾಗದಂತೆ ರಾತ್ರಿಯೆಲ್ಲಾ ಎಚ್ಚರವಾಗಿಯೇ ಇದ್ದು ಕಾದು ಕೊಂಡಿರುವನು.

ಕೇವಲ ಪರಿಚಾರಕನಂತೆ ಈ ಕೆಲಸಗಳನ್ನು ಮಾಡುತ್ತಿದ್ದುದು ಮಾತ್ರವೇ ಆತನ ಕಾರ್ಯವಾಗಿರಲಿಲ್ಲ. ವನಕ್ಕೆ ಕಾಲಿಟ್ಟೊಡನೆಯೇ ಅವರನ್ನು ಆಕ್ರಮಿಸಿದ ವಿರಾಧ ರಾಕ್ಷಸನನ್ನು ಶ್ರೀರಾಮನೊಂದಿಗೆ ಸೇರಿ ಸಂಹರಿಸುವಲ್ಲಿ ವಿಶೇಷ ಶೌರ್ಯಪ್ರತಾಪಗಳನ್ನು ಪ್ರಕಟಿಸಿದನು. ಮುಂದೆ ಒಂದಾನೊಂದು ದಿನ ಸೀತಾರಾಮರು ಮರದಡಿಯಲ್ಲಿಕುಳಿತು ಆಹಾರ ತೆಗೆದುಕೊಳ್ಳುತ್ತಿದ್ದಾಗ ದೂರದಲ್ಲಿ ಧೂಳಿದ್ದುದನ್ನು ನೋಡಿ ಅದೇನೋ ಎಂದು ಶಂಕಿಸಲು ಲಕ್ಷ್ಮಣನು ಒಡನೆ ಉನ್ನತವಾದ ಒಂದು ಮರವನ್ನೇರಿ ಸುತ್ತಲೂ ನೋಡಿ ಏನನ್ನೂ ಕಾಣದೆ, ಉತ್ತರದಿಕ್ಕಿನಕಡೆಗೆ ನೋಡಲು, ಅಲ್ಲಿ ಅನೇಕ ಆನೆಗಳೂ, ಕುದುರೆಗಳೂ, ರಥ ಪದಾತಿಗಳೂ ವಿಶೇಷ ಕೋಲಾಹಲ ಮಾಡುತ್ತಾ ಬರುತ್ತಿದ್ದುದನ್ನು ಕಂಡು, ಅದು ಭರತನ ಸೇನೆಯೇ ಇರಬಹುದೆಂದು ತರ್ಕಿಸಿ, ಶ್ರೀರಾಮನನ್ನು ಕುರಿತು, -'ಅಣ್ಣಾ ಇದಕ್ಕಿನ್ನು ಸಂದೇಹವಿಲ್ಲ. ಅದು ಆ ನೀಚಳಾದ ಕೈಕೇಯಿಯ ಮಗನ ಸೇನೆಯೇ ಎನ್ನಲು ಅಡ್ಡಿಯಿಲ್ಲ. ಅವನು ಅನಾಯಾಸವಾಗಿ ತನಗೆ ದೊರೆತ ರಾಜ್ಯವನ್ನು ನಿಷ್ಕಂಟಕವಾದುದನ್ನಾಗಿ ಮಾಡಿಕೊಳ್ಳಲೋಸುಗ ಕಾಡಿನಲ್ಲಿ ಏಕಾಂಗಿಯಾಗಿ ಅಲೆಯುತ್ತಿರುವ ನಿನ್ನನ್ನು ಹುಡುಕಿ ಸಂಹರಿಸಬೇಕೆಂದು ಬರುತ್ತಿರುವನೆಂದೇ ನನಗೆ ತೋರುತ್ತಿರುವುದು. ಆಹಾ, ಇಂತಹ ದುಷ್ಟಾಲೋಚನೆಯುಳ್ಳ ಅವನು ಮಹಾ ಪಾಪಿಯಲ್ಲವೆ ? ಅವನು ಸಮೀಪಕ್ಕೆ ಬಂದು ನನ್ನ ಕೈಗೆ ಸಿಕ್ಕಿದನೆಂದರೆ, ಅವನನ್ನು ಕೊಲ್ಲದೆ ಬಿಡುವೆನೇ ! ಅಂತಹ ದುರಾಶಾಗ್ರಸ್ತನನ್ನು ಕೊಂದುದರಿಂದ ಯಾವ ಪಾಪವೂ ಬರಲಾರದು. ಬಹು ದಿನಗಳಿಂದ ನನ್ನ ಆಯುಧಗಳಿಗೂ, ಶಸ್ತ್ರಾಸ್ತ್ರಗಳಿಗೂ ತಕ್ಕ ಆಹಾರವಿಲ್ಲದೆ ಅವು ಹಸಿದಿವೆ. ಈ ದಿನ ಭ್ರಾತೃದ್ರೋಹಿಯಾದ ಭರತನನ್ನೂ ಅವನ ಸೈನ್ಯವನ್ನೂ ಅವುಗಳಿಗೆ ಆಹುತಿಯನ್ನಾಗಿಸುವೆನು' ಎಂದು ಕಟಕಟನೆ ಹಲ್ಗಡಿದು ಗರ್ಜಿಸುತ್ತಿದ್ದನು.

ಆಗ ರಾಮಚಂದ್ರನು ಅವನನ್ನು ಕುರಿತು -' ತಮ್ಮಾ ಲಕ್ಷ್ಮಣಾ, ಕೋಪಮಾಡಬೇಡ. ಭರತನು ಕೈಕೇಯಿಯ ಮಗನೇ ಆದರೂ ಅವನನ್ನು

ಅಂತಹ ನೀಚನೆಂದು ಎಣಿಸಬೇಡ. ಮಹಾಪ್ರಾಜ್ಞನಾದ ಭರತನು ಊರಿಗೆ ಬಂದ ತರುವಾಯ ತನ್ನ ತಾಯಿಯಿಂದ ಇಂತಹ ಅನರ್ಥಕಾರ್ಯವು ನಡೆದು ಹೋದುದನ್ನು ಕಂಡು ಪರಿತಾಪಪಟ್ಟು ನಮ್ಮನ್ನು ಹಿಂದಿರುಗಿ ಕರೆದೊಯ್ಯಲಿಕ್ಕಾಗಿ ಬರುತ್ತಿರುವನೆಂಬುದರಲ್ಲಿ ಸಂದೇಹವಿಲ್ಲ. ಅವನಲ್ಲಿ ಪಾಪಯೋಚನೆಯನ್ನು ಮಾಡುವುದು ಉಚಿತವಲ್ಲ. ಅವನು ಸಜ್ಜನನು. ವಿಚಾರವಿಲ್ಲದೆ ಅವನನ್ನು ಘಾತಿಸಿದಲ್ಲಿ ನಾವು ವಿಶೇಷ ಲೋಕಾಪವಾದಕ್ಕೆ ಗುರಿಯಾಗಬೇಕಾದೀತು' ಎಂದು ಎಚ್ಚರಿಸಿ ಸಮಾಧಾನಗೊಳಿಸಿದನು. ಹೀಗೆ ಲಕ್ಷ್ಮಣನು ಶ್ರೀರಾಮನಲ್ಲಿ ತನಗಿದ್ದ ಭಕ್ತ್ಯತಿಶಯದಿಂದ ಕೆಲವುವೇಳೆ ಬಹುವಾಗಿ ದುಡುಕಿ ಬಿಡುತ್ತಿದ್ದನಾದರೂ, ಕೊನೆಯಲ್ಲಿ ತನ್ನ ಅಭಿಪ್ರಾಯವು ತಪ್ಪೆಂದು ತಿಳಿದಮೇಲೆ ಪಶ್ಚಾತ್ತಾಪಗೊಂಡು ತನ್ನ ಲೋಪವನ್ನು ತಿದ್ದಿಕೊಳ್ಳುವನು.

ಅರಣ್ಯವಾಸದಲ್ಲಿ ಮುಂದೆ ಶೂರ್ಪನಖಾಪ್ರಸಂಗದಲ್ಲಿ ಲಕ್ಷ್ಮಣನು ಶ್ರೀರಾಮನ ಅಭಿಪ್ರಾಯವನ್ನು ಗ್ರಹಿಸಿ, ಆ ದುಷ್ಟಸ್ತ್ರೀಯ ಕಿವಿ ಮೂಗುಗಳನ್ನು ಕೊಯ್ದು ಅಟ್ಟಿದುದೇ, ಮುಂದಿನ ರಾಮಾಯಣ ಕಥೆಗೆ ಬೀಜರೂಪವಾಗಿ ಪರಿಣಮಿಸಿತು. ಶೂರ್ಪನಖಾನಾಶಿಕಾಚ್ಛೇದನ ಕಾರ್ಯವಾಗದಿದ್ದಲ್ಲಿ, ಶ್ರೀರಾಮಾದಿಗಳು ಆವರೆಗೆ ಕಳೆದಂತೆಯೇ ಹದಿನಾಲ್ಕು ವರ್ಷಗಳಲ್ಲಿ ಮಿಕ್ಕ ಕಾಲಾವಧಿಯನ್ನೂ ಹಾಗೆಯೇ ಕಳೆದು ತರುವಾಯ ಅಯೋಧ್ಯೆಗೆ ಹಿಂದಿರುಗಬಹುದಿತ್ತು. ಆದರೆ ಶೂರ್ಪನಖಿಯಿಂದ ಬೆಳೆದ ಪ್ರಸಂಗವು ಖರದೂಷಣಾದಿಗಳ ಹದಿನಾಲ್ಕು ಸಹಸ್ರ ಸೈನ್ಯದೊಂದಿಗೆ ಶ್ರೀರಾಮನಿಗೆ ಭಯಂಕರ ಯುದ್ಧ ಘಟನೆಯನ್ನು ತಂದಿಟ್ಟಿತು. ರಾಮನು ಅದಕ್ಕೆ ಚಿಂತಿಸದೆ, ಲಕ್ಷ್ಮಣನಿಗೆ, ಸೀತೆಯನ್ನು ಸಮೀಪದ ಗಿರಿಗುಹೆಯೊಳಕ್ಕೆ ಕರೆದೊಯ್ದು ಸುರಕ್ಷಿತವಾಗಿ ನೋಡಿಕೊಂಡಿರಲು ಹೇಳಿ, ತಾನು ಆ ದೊಡ್ಡ ಸೈನ್ಯದೊಂದಿಗೆ ಹೋರಾಡಿ ಜಯಿಸಿದನು.

ತಾನು ಹುರಿದುಂಬಿಸಿ ಕರೆತಂದಿದ್ದ ಖರದೂಷಣಾದಿಗಳ ಭಯಂಕರ ಸೈನ್ಯವು ನಿರ್ನಾಮವಾದುದು, ಶೂರ್ಪನಖಿಗೆ ಮಹಾಭಯವನ್ನುಂಟುಮಾಡಿತು. ಅವಳು ಲಂಕೆಗೆ ಓಡಿ, ತಮ್ಮಣ್ಣನಾದ ರಾವಣನಲ್ಲಿ ತನ್ನ ಅವಸ್ಥೆಯನ್ನು ದೂರಿಕೊಂಡು, ಲೋಕೋತ್ತರ ಸುಂದರಿಯಾದ ಸೀತೆಯನ್ನು

ಅಪಹರಿಸುವಂತೆ ಅವನಿಗೆ ಪ್ರೇರಿಸಿ, ಅವನನ್ನು ಜನಸ್ಥಾನಕ್ಕೆ ಕರೆತಂದಳು. ರಾವಣನು, ಮಾಯಾವಿಯಾದ ಮಾರೀಚನನ್ನು ಕಾಂಚನಮೃಗವನ್ನಾಗಿಸಿ ಕರೆತಂದು ಆ ಮೃಗದ ಸಹಾಯದಿಂದ ಸೀತೆಯ ಬಳಿಯಿಂದ ರಾಮ ಲಕ್ಷ್ಮಣರನ್ನು ಅಗಲಿಸಿ ಅವಳನ್ನು ಹೊತ್ತೊಯ್ಯಲು ಯೋಚಿಸಿದನು. ಅವನು ಯೋಚಿಸಿದಂತೆಯೇ ಆಯಿತು. ಸೀತೆಯು ತನ್ನ ಕಣ್ಣಿಗೆ ಚೆಲುವಾಗಿ ಸುಳಿದ ಆಶ್ಚರ್ಯಕರವಾದ ಆ ಮಾಯಾಮೃಗವನ್ನು ನೋಡಿ ಮೋಹಿಸಿ ಅದನ್ನು ತಂದುಕೊಡೆಂದು ಶ್ರೀರಾಮನನ್ನು ಯಾಚಿಸಿದಳು. ರಾಮನು ತನ್ನ ಪ್ರಿಯ ಪತ್ನಿಯ ಇಚ್ಛೆಯನ್ನು ನೆರವೇರಿಸಲು ಧನುರ್ಬಾಣಧಾರಿಯಾಗಿ ಹೊರಡಲುದ್ಯುಕ್ತನಾದನು. ಆಗ ಲಕ್ಷ್ಮಣನು, —'ಅಣ್ಣಯ್ಯಾ, ಇದು ನಿಜವಾದ ಮೃಗವಲ್ಲ. ರಾಕ್ಷಸರ ಮಾಯೆಯಿದು. ನಾವು ಬಹು ಜನ ರಾಕ್ಷಸರನ್ನು ಘಾತಿಸಿರುವುದರಿಂದ ಅವರು ಬಗೆ ಬಗೆಯ ರೂಪಗಳಿಂದ ನಮ್ಮನ್ನು ಮೋಸಗೊಳಿಸಿ ಹಿಂಸಿಸಲು ಹೊಂಚುಹಾಕುತ್ತಿರುವರು. ಈ ಮೃಗವೂ ನಮ್ಮನ್ನು ವಂಚಿಸಲು ಏರ್ಪಟ್ಟ ಒಂದು ಸಾಧನವೆಂದು ತಿಳಿ. ಇದನ್ನು ಅನುಸರಿಸಿ ಹೋಗುವುದು ಮಹಾ ಅಪಾಯಕರವಾದುದು' ಎಂದು ವಿಜ್ಞಾಪಿಸಿ ಎಚ್ಚರಿಸಿದನು.

ಆದರೆ ರಾಮನು ಲಕ್ಷ್ಮಣನ ಮಾತಿಗಾಗಿ ಆ ಪ್ರಯತ್ನವನ್ನು ಬಿಡಲು ಒಪ್ಪಲಿಲ್ಲ. —'ತಮ್ಮಾ ನೀನು ಹೇಳುವಂತೆ ಈ ಮೃಗರೂಪಿನಿಂದ ಬಂದಿರುವವನು ರಾಕ್ಷಸನೇ ಆಗಿದ್ದಲ್ಲಿ, ಮಾಯಾವಿಯೂ ಸಜ್ಜನ ಹಿಂಸಕನೂ ಆದ ಅಂತಹ ದುಷ್ಟನನ್ನು ವಧಿಸುವುದೂ ನಮ್ಮ ಕರ್ತವ್ಯವೇ ಅಲ್ಲವೆ? ಆದುದರಿಂದ ನೀನು ಸೀತೆಯನ್ನು ಜಾಗರೂಕತೆಯಿಂದ ನೋಡಿಕೊಂಡಿರು. ನಾನಿನ್ನು ಸ್ವಲ್ಪ ಹೊತ್ತಿನಲ್ಲೇ ಆ ಮೃಗವನ್ನು ಹಿಡಿದು ತರುವೆನು; ಇಲ್ಲವೆ ಕೊಂದು ತರುವೆನು' ಎಂದು ನಡಿದು ಹೊರಟನು. ಅದು ಚಿನ್ನದ ಜಿಂಕೆಯಲ್ಲದೆ ಶ್ರೀರಾಮನನ್ನು ವಂಚಿಸಲು ಬಂದಿದ್ದ ಮಾಯಾಮೃಗವೇ ಆಗಿದ್ದುದರಿಂದ ಅವನನ್ನು ಉಪಾಯದಿಂದ ಬಹು ದೂರಕ್ಕೆ ಕರೆದೊಯ್ದಿತು. ರಾಮನು ಬೇಸತ್ತು ಬಾಣಪ್ರಯೋಗ ಮಾಡಿದೊಡನೆಯೇ,—'ಹಾ ಸೀತೇ, ಹಾ ಲಕ್ಷ್ಮಣಾ' ಎಂದು ಅರಚಿಕೊಂಡು ಪ್ರಾಣಬಿಟ್ಟಿತು. ಅದನ್ನು ಕೇಳಿ ರಾಮನು ಅದರಿಂದ ಏನು ಪ್ರಮಾದವಾಗುವುದೋ, ಸೀತೆಯು ಬೆದರಿ ಲಕ್ಷ್ಮ

ಣನನ್ನೆಲ್ಲಿ ಕಳುಹಿಸಿಬಿಡುವಳೋ ಎಂದು ಶಂಕಿಸಿ, ಅದರ ಚರ್ಮವನ್ನು ತೆಗೆದುಕೊಂಡು ಆತುರದಿಂದ ಹಿಂದಿರುಗಿ ಬರುತ್ತಿದ್ದನು.

ಲಕ್ಷ್ಮಣನ ಜೀವಮಾನದಲ್ಲೇ ಶ್ರೀರಾಮನ ಆಜ್ಞೆಯನ್ನು ಮೀರಿದ ಸಂದರ್ಭವೆಂದರೆ ಇದೊಂದೇ!'ಹಾ ಸೀತೇ, ಹಾ ಲಕ್ಷ್ಮಣಾ'ಎಂಬ ಕೂಗನ್ನು ಕೇಳಿದೊಡನೆಯೇ, ಅದು ಶ್ರೀರಾಮನ ಧ್ವನಿಯೇ ಎಂದೂ, ರಾಮನಿಗೇನೋ ಆಪತ್ತುಂಟಾಗಿದೆಯೆಂದೂ, ತಿಳಿದು,ಸೀತೆಯು-'ಲಕ್ಷ್ಮಣಾ, ಒಡನೆ ಹೊರಟು ಶ್ರೀರಾಮನನ್ನು ಕರೆದುತಾರೆಂದು ಬಲವಂತಪಡಿಸಿದಳು. ಅದು ಲಕ್ಷ್ಮಣನಿಗೆ ಬಹು ಸಂಕಟದ ವೇಳೆಯಾಗಿ ಪರಿಣಮಿಸಿತು. ಏನುಮಾಡಲೂ ತೋರದು. ಶ್ರೀರಾಮನಿಗೆ ಏನಪಾಯವೂ ಉಂಟಾಗಿರಲಾರದೆಂದು ಅವನಿಗೆ ದೃಢನಂಬಿಕೆಯಿದ್ದಿತು. 'ತಾಯೇ, ಬೆದರದಿರು. ಇದು ರಾಮನ ಧ್ವನಿಯಲ್ಲ. ಮಾಯಾವಿಗಳಾದ ರಾಕ್ಷಸರ ಮಾಯೆಯಿದು. ರಾಮನನ್ನು ಜಯಿಸಿ, ಹೀಗೆ ಅಪಾಯಕ್ಕೆ ಗುರಿಮಾಡಬಲ್ಲ ಧೀರನು ಲೋಕದಲ್ಲಿ ಯಾವನಿರುವನು?' ಎಂದು ಮುಂತಾಗಿ ಎಷ್ಟು ಹೇಳಿದರೂ,ಆ ಗಮನವೇ ಇಲ್ಲದೆ, ಸೀತೆಯು ಲಕ್ಷ್ಮಣನನ್ನು ಮನಬಂದಂತೆ ನಿಂದಿಸತೊಡಗಿದಳು.-'ಎಲೋ ಲಕ್ಷ್ಮಣಾ,ನಿನ್ನ ಅಣ್ಣನು ಪ್ರಾಣಾಪಾಯವೊದಗಿ ಕೂಗಿಕೊಳ್ಳುತ್ತಿದ್ದರೂ, ನೀನು ಆ ಲಕ್ಷ್ಯವೇ ಇಲ್ಲದೆ ಇಲ್ಲೇ ನಿಂತಿರುವುದನ್ನು ನೋಡಿದರೆ, ನೀನು ಶತ್ರುಪಕ್ಷದವನೆಂದು ತೋರುತ್ತದೆ. ಭರತನ ಭಂಟನಾಗಿ ಇಲ್ಲಿದ್ದು ಸಮಯ ಸಾಧನೆಮಾಡಿ ರಾಮನಿಗೆ ಅಪಾಯವುಂಟಾದೊಡನೆಯೇ ನನ್ನನ್ನು ಅಪಹರಿಸಬೇಕೆಂದು ಹೊಂಚಿಕೊಂಡಿರುವಂತೆ ತೋರುತ್ತದೆ. ಆದರೆ, ನೀಚಾ, ನಾನು ನಿನಗೆ ವಶಳಾಗುವೆನೆಂದು ತಿಳಿಯಬೇಡ. ಶ್ರೀರಾಮನನ್ನಲ್ಲದೆ ನಾನು ಪರಪುರುಷನನ್ನು ಕನಸಿನಲ್ಲಾದರೂ ಧ್ಯಾನಿಸುವೆನೆ? ಇಂತಹ ಈ ಕ್ಷುದ್ರಯೋಚನೆಗಳನ್ನು ನನ್ನ ವಿಷಯದಲ್ಲಿ ಮಾಡಬೇಡ. ಹೋಗು. ಈಗಲೇ ಹೊರಡು'. ಎಂದು ಮುಂತಾದ, ಕಿವಿಯಿಂದ ಕೇಳಲಾಗದ ಅಸಹ್ಯ ಮಾತುಗಳಿಂದ ನಿಂದಿಸತೊಡಗಿದಳು. ಆಗ ಲಕ್ಷ್ಮಣನು ಏನುಮಾಡಬಹುದು! ವಿಧಿಯಿಲ್ಲದೆ ಹೊರಟನು. ಹೊರಡುವಾಗ ಮಹದ್ವ್ಯಸನದಿಂದ-'ತಾಯೇ ಇದೇಸಿದು? ನಿನ್ನ ಬುದ್ಧಿಯು ಏಕಿಷ್ಟು ವಿಕಾರ ಸ್ಥಿತಿಯನ್ನು ಹೊಂದಿತು! ರಾಮನನ್ನೂ ಆತನ ಪತ್ನಿಯಾದ ನಿನ್ನನ್ನೂ ನನ್ನ ಆರಾಧ್ಯ ದೇವತೆಗಳೆಂದು ಭಾವಿಸಿ

ಸೇವಿಸುತ್ತಿರುವ ನನ್ನ ವಿಷಯದಲ್ಲಿ ಇಂತಹ ಪಾಪಶಂಕೆಯನ್ನು ಮಾಡಬಹುದೆ? ಆದರೂ, ನಿನ್ನ ಮಾತುಗಳು ಕೇಳಲು ಅಸಹನೀಯವಾಗಿವೆಯಾದ್ದರಿಂದ ನಾನೆಂತೂ ಹೊರಡುತ್ತೇನೆ. ಏನೋ ಒಂದು ಮಹದಾಪತ್ತು ಸಂಭವಿಸಲಿರುವುದೆಂದು ನನ್ನ ಮನೋದೇವತೆಯು ಹೇಳುತ್ತಿದೆ. ಏನಾದರಾಗಲಿ, ನಾನೇನುಮಾಡಲಿ! ಎಲೈ ವನದೇವತೆಗಳಿರಾ, ನನ್ನ ಮಾತೆಯನ್ನು ಈ ಕಾಡಿನಲ್ಲಿ ನೀವೇ ಕಾಪಾಡಬೇಕು' ಎಂದು ಪ್ರಾರ್ಥಿಸಿ ಹೊರಟನು.

ಅತ್ತ ಮಾರೀಚನನ್ನು ಸಂಹರಿಸಿ ಭಯದಿಂದ ಆಶ್ರಮದಲ್ಲಿ ಏನಪಾಯ ಸಂಭವಿಸಿರುವುದೋ ಎಂದು ಹಿಂದಿರುಗಿ ಬರುತ್ತಿದ್ದ ರಾಮನಿಗೆ ಲಕ್ಷ್ಮಣನ ಭೇಟಿಯಾಗುವುದು. ಶ್ರೀರಾಮನು ಅಲ್ಲೂ ಲಕ್ಷ್ಮಣನನ್ನು ಬಹುಮಟ್ಟಿಗೆ ಆಕ್ಷೇಪಿಸುವನು. ಲಕ್ಷ್ಮಣನು ನಡೆದ ಸಂಗತಿಯನ್ನೆಲ್ಲ ಹೇಳಿ, ಆಕೆಯ ನಿಷ್ಠುರವಾಕ್ಯವನ್ನು ಕೇಳಲಾಗದೆ ಹೊರಟು ಬಂದೆನೆಂದು ಹೇಳುವನು. ಮುಂದೆ ಇಬ್ಬರೂ ಆಶ್ರಮದೆಡೆಗೆ ಬರುವರು. ಅಷ್ಟರಲ್ಲಿ ಇತ್ತ ರಾವಣನು ಕಪಟ ಸನ್ಯಾಸಿಯ ವೇಷದಿಂದ ಬಂದು ಸೀತೆಯನ್ನು ಅಪಹರಿಸಿ ಕೊಂಡೊಯ್ದಿರುವನು. ರಾಮನು ಆಶ್ರಮದಲ್ಲಿ ಸೀತೆಯಿಲ್ಲದಿರುವುದನ್ನು ನೋಡಿ ಭ್ರಾಂತನಾಗಿ, ಅಲ್ಲಲ್ಲಿ ಹುಡುಕತೊಡಗುವನು. ಎಲ್ಲಿಯೂ ಸೀತೆಯ ಸುಳಿವು ಕಂಡುಬಾರದುದನ್ನು ತಿಳಿದು ಅಗಾಧ ದುಃಖಮಗ್ನನಾಗಿ ಹುಚ್ಚನಂತೆ ಹೋಗುವನು ಮಾರ್ಗದಲ್ಲಿ ಜಟಾಯುವಿನಿಂದ, ಸೀತೆಯನ್ನು ರಾವಣನೆಂಬ ರಾಕ್ಷಸನು ಕೊಂಡೊಯ್ದನೆಂಬ ಸಂಗತಿಯು ತಿಳಿಯುವುದು.

ತರುವಾಯ ಆಕೆಯಿದ್ದ ಸ್ಥಳವನ್ನು ಗೊತ್ತು ಹಚ್ಚುವ ಪ್ರಯತ್ನವು ನಡೆಯಲಾಗುವುದು. ಮಾರ್ಗದಲ್ಲಿ ವಿರಾಧನ ಸಂಹಾರ,-ಶರಭಂಗಮಹರ್ಷಿ-ಗಳ ದರ್ಶನ ಇವುಗಳಿಂದ ರಾವಣನ ವೃತ್ತಾಂತವನ್ನು ಸ್ವಲ್ಪ ಸ್ವಲ್ಪವಾಗಿ ತಿಳಿಯುತ್ತಾ ಮುಂದರಿಸಿ, ಶಬರಿಯನ್ನು ಕಂಡು, ಆಕೆಯಿಂದ ಋಷ್ಯಮೂಕದಲ್ಲಿದ್ದ ಸುಗ್ರೀವನ ಸ್ನೇಹಮಾಡಿಕೊಂಡಲ್ಲಿ ಸೀತಾನ್ವೇಷಣಕ್ಕೆ ಸಹಾಯವಾಗುವುದೆಂಬುದನ್ನರಿತು ಮುಂದೆ ಹೊರಡುವರು. ಅಲ್ಲಿ ಆಂಜನೇಯನು ವಟುರೂಪಿನಿಂದ ಬಂದು ಅವರನ್ನು ಸಂಧಿಸಿ, ಅವರ ಯೋಗಕ್ಷೇಮವನ್ನು ತಿಳಿದು, ಸುಗ್ರೀವನ ವಿಚಾರವನ್ನೂ ತಿಳಿಸಿ ಅವರಿಬ್ಬರಿಗೂ ಸ್ನೇಹಮಾಡಿಸುವ ಉದ್ದೇಶದಿಂದ ರಾಮಲಕ್ಷ್ಮಣರನ್ನು ಅವನ ಬಳಿಗೆ ಕರೆದೊಯ್ದು

ರಾಮ ಸುಗ್ರೀವರಿಗೆ ಸ್ನೇಹಮಾಡಿಸುವನು. ಆ ಸಂದರ್ಭದಲ್ಲಿ, ಸುಗ್ರೀವನು, ಸೀತೆಯನ್ನು ರಾವಣನು ಅಪಹರಿಸಿ ಆಕಾಶಮಾರ್ಗದಲ್ಲಿ ಕೊಂಡೊಯ್ಯುತ್ತಿರುವಾಗ ಮುಂದೆ ತನ್ನ ಗುರುತು ಸಿಕ್ಕಲೆಂದು ಆಕೆಯು ತನ್ನ ಕೆಲವು ಆಭರಣಗಳನ್ನು ಸೀರೆಯ ಸೆರಗಿನಲ್ಲಿ ಕಟ್ಟಿ ತಮ್ಮ ಬಳಿಗೆ ಒಗೆದಿದ್ದುವುಗಳೆಂದು ಹಾರ ಕುಂಡಲ ಕೇಯೂರ ನೂಪುರಾದಿಗಳನ್ನು ಶ್ರೀರಾಮನಿಗೆ ತೋರಿಸಿದನು. ರಾಮನು ಅವು ಸೀತೆಯವೇ ಎಂಬುದನ್ನು ಗುರುತಿಸೆಂದು ಲಕ್ಷ್ಮಣನನ್ನು ಕೇಳಿದಾಗ, ಅವನು ಹೇಳಿದ ಮಾತುಗಳು, ಆತನಿಗೆ ಸೀತಾದೇವಿಯಲ್ಲಿ ಎಂತಹ ಪೂಜ್ಯಭಾವವಿದ್ದಿತೆಂಬುದನ್ನು ವ್ಯಕ್ತಗೊಳಿಸುತ್ತವೆ. ಆ ಮಹಾನುಭಾವನು *ಸ್ವಾಮಿ ರಾಮಚಂದ್ರಾ, ನನಗೆ (ಸೀತೆಯ) ಕೇಯೂರದ ಪರಿಚಯವಿಲ್ಲ. ಆಕೆಯ ಕರ್ಣಾಭರಣವಾದ ಕುಂಡಲದ ಪರಿಚಯವಿಲ್ಲ. ಆದರೆ ನಿತ್ಯವೂ ಆಕೆಗೆ ಪಾದಾಭಿವಾದನ ಮಾಡುತ್ತಿದ್ದಾಗ ನೋಡುತ್ತಿದ್ದ ಪಾದಾಭರಣವಾದ ನೂಪುರದ ಪರಿಚಯವು ಮಾತ್ರ ನನಗುಂಟು' ಎಂದು ಹೇಳಿದನು. ಆಹಾ, ಆಕೆಯ ಮುಖದ ಕಡೆಗೆ ಕೂಡ ದಿಟ್ಟಿಸಿ ನೋಡಿ ಅರಿಯದಂತಹ,-ಆಕೆಯ ಪಾದಗಳ ಹೊರತು ಆಕೆಯ ಅನ್ಯಅಂಗಗಳನ್ನು ಕಾಣದ, ಮಹಾಸಂಯಮಶೀಲನಾದ ಲಕ್ಷ್ಮಣಸ್ವಾಮಿಯ ಅಗಾಧ ಮಹತ್ವವನ್ನು ಪಾಮರರಾದ ನಾವೆಂತು ತಿಳಿಯಬಲ್ಲೆವು!

ಸೀತೆಯನ್ನು ಅಗಲಿದುದಕ್ಕಾಗಿ ಶ್ರೀರಾಮನು ಪ್ರಕಟಿಸಿರುವ ವಿರಹದುಃಖವು ಅಪಾರವಾದುದು. ಅನೇಕ ವೇಳೆ ಕೇವಲ ಹುಚ್ಚನಂತೆ, ಪ್ರಜ್ಞೆಯೇ ಇಲ್ಲದವನಂತೆ, ಪ್ರಾಣಾಪಾಯವನ್ನುಂಟುಮಾಡಿಕೊಳ್ಳಲು ಸಹ ಆತನು ಪ್ರಯತ್ನಿಸಿರುವನು. ಆ ಸಂದರ್ಭಗಳಲ್ಲೆಲ್ಲ ಲಕ್ಷ್ಮಣಸ್ವಾಮಿಯು ಪ್ರಿಯವಾಕ್ಕುಗಳಿಂದ, ವಿರಹತಾಪವನ್ನು ಸಹಿಸಿಕೊಳ್ಳೆಂದು, ಸಹಸ್ರಾರುಕಾಲ ತಪಸ್ಸುಮಾಡಿದ ಮುನಿಜನಕ್ಕೆ ಮಾತ್ರ ಸಾಧ್ಯವಾದಂತಹ ದಿವ್ಯಬೋಧನೆಯನ್ನು ಮಾಡುತ್ತಿದ್ದನು. ತಾನೂ ರಾಮನಂತೆಯೇ, ಒಂದೆರಡು ದಿನಗಳಲ್ಲದೆ ಹನ್ನೆರಡು ಹದಿಮೂರು ವರ್ಷಕಾಲ ತನ್ನ ಪತ್ನಿಯ ಮುಖ ಸಂದರ್ಶನವಿಲ್ಲದೆಯೇ ಇದ್ದವನಾದರೂ, ಮಹಾಕಾಮೋತ್ತೇಜಕಗಳಾದ ಶಿಶಿರ

*ನಾಹಂ ಜಾನಾಮಿ ಕೇಯೂರೇ ನಾಹಂ ಜಾನಾಮಿ ಕುಂಡಲೇ ।
ನೂಪುರೇತ್ವಭಿ ಜಾನಾಮಿ ನಿತ್ಯಂ ಪಾದಾಭಿವಂದನಾತ್ ॥

ವಸಂತ ಋತುಗಳಲ್ಲಿ ಸಹ ಒಂದು ದಿನವಾದರೂ ತನ್ನ ಪ್ರಿಯಪತ್ನಿಯನ್ನು ನೆನೆಸಿಕೊಂಡು ವ್ಯಥೆಪಟ್ಟ ಸಂದರ್ಭವು ದೊರಕದು. ಅಂತಹ ಜಿತೇಂದ್ರಿಯನು, ಅಂತಹ ಸಂಯಮಿ ಶಿರೋಮಣಿಯು, ಅಂತಹ ಧೀರನು ನಮ್ಮ ಲಕ್ಷ್ಮಣಸ್ವಾಮಿಯು!

ಮುಂದೆ ಮಹಾಸಾಹಸವಂತರಾದ ಕಪಿಸೇನೆಯು ಅಗಾಧ ಪರಿಶ್ರಮದಿಂದ ಸಮುದ್ರಕ್ಕೆ ಸೇತು ಬಂಧನವಾಗಿ, ರಾಮ ಸೈನ್ಯವು ಲಂಕೆಯ ಸಮೀಪದಲ್ಲಿ ಬಂದಿಳಿಯುವುದು. ರಾವಣನು, ತಾನು ಕೇವಲ ಮಾನವ ಮಾತ್ರನೆಂದು ಭಾವಿಸಿ ಅಲಕ್ಷ್ಯದಿಂದಿದ್ದ ರಾಮನು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ ಅಗಾಧ ವಾನರಸೇನೆಯೊಂದಿಗೆ ಬಂದು ರಾಣ್ಯ ಹಾಕಿರುವನೆಂದು ಕೇಳಿ ವಿಚಾರ ಪಡಸಾಗುವನು. ತಮ್ಮನಾದ ವಿಭೀಷಣನು ಹೇಳಿದ ಮಾತೂ ವಿಷವಾಗಿ ಪರಿಣಮಿಸಿ, ಅವನನ್ನು ಧಿಕ್ಕರಿಸಲು, ಅವನು ರಾಮನಲ್ಲಿ ಶರಣಾಗತಿಯನ್ನು ಹೊಂದಿ ಲಂಕಾರಾಜ್ಯಕ್ಕೆ ಪಟ್ಟಾಭಿಷಿಕ್ತನಾಗುವನು. ರಾಮ ರಾವಣರ ಸೇನೆಗೆ ಯುದ್ಧಾರಂಭವಾಗುವುದು.

ಶ್ರೀರಾಮಸೇವಾಕಾಲದಲ್ಲಿ ನಮ್ರಸೇವಕನಾಗಿ ಸೌಮ್ಯ ಕಾರ್ಯಗಳಲ್ಲಿ ಮಗ್ನನಾಗಿರುವ ಸೌಮಿತ್ರಿಯು ಯುದ್ಧಕಾಲದಲ್ಲಿ ಪ್ರಳಯ ಭೈರವನಂತೆ ಭಯಂಕರನಾಗಿರುವನು. ರಾಮ-ರಾವಣರ ಯುದ್ಧದಲ್ಲಿ ಲಕ್ಷ್ಮಣನು ಎರಡು ಸಂದರ್ಭಗಳಲ್ಲಿ ಗೋಚರನಾಗುವನು. ರಾವಣನೊಂದಿಗೆ ಒಮ್ಮೆಯುದ್ಧ ನಡೆದಾಗ, ಆ ದುರುಳನು ತನ್ನ ಅಷ್ಟ ಘಂಟಾಶಕ್ತಿ ಎಂಬ ಭಯಂಕರ ಆಯುಧವನ್ನು ಸೌಮಿತ್ರಿಯ ಎದೆಗೆ ಗುರಿಯಿಟ್ಟು ಪ್ರಯೋಗಿಸುವನು. ಅದರಿಂದ ನೊಂದು ಮೂರ್ಛಿತನಾಗಿ ಬಿದ್ದ ಲಕ್ಷಣನನ್ನು ರಾವಣನು ಹೊತ್ತೊಯ್ಯಬೇಕೆಂದು, ಕೈಲಾಸಪರ್ವತವನ್ನೆತ್ತಿದ್ದ ತನ್ನ ಇಪ್ಪತ್ತು ತೋಳುಗಳಿಂದಲೂ ಎತ್ತಲಾರದೆ ಸಂಕಟಪಡುತ್ತಿರಲು, ಆಂಜನೇಯನು - ಎಲೋ ಮೂರ್ಖ ರಾವಣನೇ, ಭೂಗೋಳವನ್ನೇ ಸಾಸುವೆಯ ಕಾಳಿನಂತೆ ತನ್ನ ಹೆಡೆಯ ಮೇಲೆ ಧರಿಸಿರುವ ಶೇಷಾವತಾರಿಯಾದ ಲಕ್ಷ್ಮಣಸ್ವಾಮಿಯನ್ನು ಕ್ಷುದ್ರನಾದ ನೀನು ಎತ್ತಲಾಪೆಯಾ,ಎಂದು, ಅವನ ಬೆನ್ನಮೇಲೆ ಅಪ್ಪಳಿಸಿ, ತಾನು ಅವಲೀಲೆಯಿಂದ ಶ್ರೀರಾಮನ ಬಳಿಗೆ ಎತ್ತಿಕೊಂಡೊಯ್ಯುವನು. ಶ್ರೀರಾಮನು, ತನಗೆ ಹದಿನಾಲ್ಕುವರ್ಷಕಾಲ ವನವಾಸದಲ್ಲಿ ಪ್ರೀತಿಯ ತಮ್ಮನೂ,ಆಪ್ತಮಿ



ಲಕ್ಷ್ಮಣ ಮೂರ್ಛೆ

ತ್ರನೂ, ಭಂಟನೂ, ಹಿತಚಿಂತಕನೂ, ಆಪ್ತಾಲೋಚನೆಯನ್ನು ಹೇಳುತ್ತಿದ್ದ ಮಂತ್ರಿಯೂ ಆಗಿದ್ದ ಲಕ್ಷ್ಮಣನು ಹಾಗೆ ಮೂರ್ಛಿತನಾಗಿ ಬಿದ್ದಿದ್ದುದನ್ನು ಕಂಡು ದುಃಖಸಹನ ಮಾಡಲಾರದೆ, ಕಣ್ಣುಗಳಿಂದ ನೀರು ಸುರಿಸುತ್ತಾ ಎಳೆ ಮಗುವಿನಂತೆ ರೋದಿಸುತ್ತಿರಲು, ಆಂಜನೇಯನು, ಅಂಜನಾಪರ್ವತವನ್ನು ಹೊತ್ತುತಂದು ಅದರಲ್ಲಿದ್ದ ವಿಶಲ್ಯಕರಣಿ, ಸಂಧಾನಕರಣಿ, ಸೌವರ್ಣಕರಣಿ, ಸಂಜೀವಕರಣಿ ಎಂಬ ಮಹೌಷಧಿಗಳ ಪ್ರಭಾವದಿಂದ ಲಕ್ಷ್ಮಣಸ್ವಾಮಿ ಯನ್ನು ಬದುಕಿಸುವನು. ಎಚ್ಚರಗೊಂಡ ಆ ರಾಮಾನುಜನನ್ನು ಕಂಡು ಕಪಿಕಟಕವು ಮಹದಾನಂದದಿಂದ ನಲಿದಾಡಿತು.

ಯುದ್ಧರಂಗದಲ್ಲಿ ಲಕ್ಷ್ಮಣನ ಪ್ರವೇಶವಿರುವ ಮತ್ತೊಂದು ಸಂದರ್ಭ ವೆಂದರೆ, ಇಂದ್ರಜಿತ್ತುವಿನ ವಧಾಕಾಲದಲ್ಲಿ! 'ರಾವಣನ ಸಮಸ್ತಸೇನೆಯೂ, ಅವನ ತಮ್ಮನಾದ ಕುಂಭಕರ್ಣನೂ ಗತಪ್ರಾಣರಾದಮೇಲೆ, ಮಾಯಾ ಯುದ್ಧ ನಿಪುಣನಾದ ಇಂದ್ರಜಿತ್ತು ರಾಮಲಕ್ಷ್ಮಣರನ್ನೂ ಸಮಸ್ತ ಕಪಿ ಸೇನೆಯನ್ನೂ ಸರ್ಪಾಸ್ತ್ರದಿಂದ ಬಂಧಿಸಿ ಮರವೆಗೊಳಿಸಿ, ನಿಕುಂಭಿಳಾ ಯಾಗ ಮಾಡಿ ಹೆಚ್ಚುಶಕ್ತಿ ಸಂಪಾದನೆಮಾಡಿ ಬರಲು ಉದ್ಯುಕ್ತನಾಗುವನು. ಆಗ ವಿಭೀಷಣನ ಸಲಹೆಯಿಂದ ಲಕ್ಷ್ಮಣನು ಆಂಜನೇಯನೇ ಮುಂತಾದ ಕಪಿ ವೀರರೊಂದಿಗೆ, ಆ ಯಾಗ ನಡೆಯುತ್ತಿದ್ದ ಪ್ರದೇಶಕ್ಕೆ ನಡೆದು ಅವನ ಯಾಗವನ್ನು ಧ್ವಂಸಮಾಡಿ, ಅವನನ್ನುಯುದ್ಧಕ್ಕೆ ಕೆಣಕುವನು. ಇಬ್ಬರು ವೀರರಿಗೂ ಯುದ್ಧವು ಬಹಳ ಭಯಂಕರವಾಗಿ ನಡೆದು, ಕೊನೆಗೆ ವೀರ ನಾದ ಲಕ್ಷ್ಮಣನ ಬಾಣಗಳಿಂದ ಇಂದ್ರಜಿತ್ತುವಿನ ಕಂಠಚ್ಛೇದವಾಗಿ ಅವ ನು ಮೃತನಾಗುವನು. ಆಗ ವಿಭೀಷಣಾದಿಗಳು ವಿಜಯೋತ್ಸವದಿಂದ ಶ್ರೀರಾಮ ಸನ್ನಿಧಿಗೆ ಬಂದು, -'ಶ್ರೀರಾಮಾ, ಇಂದ್ರಜಿತ್ತುವಿನ ಮರಣವಾದ ಮೇಲೆ ಇನ್ನು ರಾವಣನು ಬಿದ್ದಂತೆಯೇ ಎಂದು ತಿಳಿ. ಅವನು ಮಹಾ ವರಪ್ರಸಾದಗಳಿಂದ ಬಲವಂತನಾಗಿದ್ದನು. ಅವನನ್ನು ಯುದ್ಧದಲ್ಲಿ ಸಂ ಹರಿಸುವ ವೀರನು, ಹದಿನಾಲ್ಕುವರ್ಷಕಾಲ ಕೇವಲ ಫಲಾಹಾರ- ಜಲಾಹಾರ ಗಳಿಂದ ಜೀವಿಸಿ, ನಿದ್ರಾರಹಿತನಾಗಿ, ಸ್ತ್ರೀಸಂಗವಿಲ್ಲದೆ ನಿಷ್ಕಲ ಬ್ರಹ್ಮಚರ್ಯ ವ್ರತ ದೀಕ್ಷಿತನಾಗಿದ್ದರೆ ಮಾತ್ರವೇ ಸಾಧ್ಯವೆಂದು ಅವನಿಗೆ ವರವಿದ್ದಿತ್ತು. ಅವನನ್ನು ಲಕ್ಷ್ಮಣಸ್ವಾಮಿಯು, ತನ್ನ ಅತಿಶಯ ಪ್ರಯಾಸಸಾಧ್ಯವಾದ

ನಿಷ್ಠುರ ತಪಶ್ಶಕ್ತಿಯ ಬಲದಿಂದ ಇಂದು ಸಂಹರಿಸಿರುವನು. ಇದು ಈ ಮಹಾವೀರನ ಜಿತೇಂದ್ರಿಯತ್ವವನ್ನೂ, ಏಕನಿಷ್ಠೆಯನ್ನೂ ಪ್ರದರ್ಶಿಸುತ್ತಿರುವುದು. ಈತನಿಂದಲ್ಲದೆ, ಇಂದ್ರಜಿತ್ತುವು ಮತ್ತಾವನಿಂದಲೂ ವಧಾರ್ಹನಾಗಿರಲಾರನು' ಎಂದು ನಮ್ಮ ಕಥಾನಾಯಕನ ಅಲೌಕಿಕ ವ್ರತನಿಷ್ಠೆಯನ್ನು ಪ್ರಶಂಸಿಸಿದನು. ಆ ಮಾತುಗಳನ್ನು ಕೇಳಿ ಶ್ರೀರಾಮನು, ಲಕ್ಷ್ಮಣನ ಸ್ವಾರ್ಥತ್ಯಾಗಕ್ಕಾಗಿಯೂ ಸೇವಾದೀಕ್ಷೆಗಾಗಿಯೂ ಪರಮಾಶ್ಚರ್ಯಪಟ್ಟು, ಅವನನ್ನು ಪ್ರೇಮದಿಂದ ಆಲಂಗಿಸಿ ಅಭಿನಂದಿಸಿದನು.

ತರುವಾಯ ರಾಮರಾವಣರ ಯುದ್ಧವಾಗಿ ರಾವಣನು, ಯುದ್ಧದಲ್ಲಿ ರಾಮಬಾಣಕ್ಕೆ ಆಹುತಿಯಾಗಿ ಮಡಿದು ಬೀಳುವನು. ಅವನ ಸಂಸ್ಕಾರಾದಿಗಳು ನಡೆದ ತರುವಾಯ ವಿಭೀಷಣನು ಸೀತಾದೇವಿಗೆ ಮಂಗಳಸ್ನಾನ ಮಾಡಿಸಿ, ದಿವ್ಯದುಕೂಲಗಳಿಂದ ಅಲಂಕರಿಸಿ, ಪಾಲಕಿಯಲ್ಲೇರಿಸಿಕೊಂಡು ಯುದ್ಧರಂಗದಲ್ಲಿ ಶ್ರೀರಾಮನ ಬಳಿಗೆ ಕರೆತರುವನು. ಆಗ ಶ್ರೀರಾಮನು ಲೋಕವಿಡಂಬನಕ್ಕಾಗಿ -'ಎಲೌ ಸೀತೆ, ಹಗೆಯಾದ ರಾವಣನು ಕದ್ದೊಯ್ದ ಪತ್ನಿಯನ್ನು ಬಿಡಿಸಿಕೊಳ್ಳಲಾರದ ಹೇಡಿಯೆಂಬ ಅಪವಾದವು ಹೊರಬಾರದೆಂಬುದಕ್ಕಾಗಿ, ಅವನನ್ನು ವಧಿಸಿ ಇಂದು ನಿನ್ನನ್ನು ಸೆರೆಯಿಂದ ಬಿಡಿಸಿದುದಾಯಿತು. ಒಂದು ವರ್ಷಕಾಲ, ರಾವಣಾಂತಃಪುರದಲ್ಲಿದ್ದ ನಿನ್ನನ್ನು ನಾನು ಇಂದು ಪುನಃ ಸ್ವೀಕರಿಸಿ ನಿನ್ನೊಂದಿಗೆ ಬಾಳಲು ಇಚ್ಛಿಸಲಾರೆನು. ಇನ್ನು ನಿನ್ನ ಮನಬಂದಂತೆ ಮಾಡು' ಎಂದು ನುಡಿದುಬಿಟ್ಟನು.

ಆಗ ಸೀತಾದೇವಿಯು, ಲಕ್ಷ್ಮಣಸ್ವಾಮಿಯನ್ನು ನೋಡಿ -'ಅಪ್ಪಾ ಲಕ್ಷ್ಮಣಾ, ನಿನ್ನಂತಹ ಸತ್ಯಶೀಲನಾದ ಮೈದುನನನ್ನು ಆಡಬಾರದ ದುರ್ವಾಕ್ಯಗಳಿಂದಲೂ, ಕಿವಿಯಿಂದ ಕೇಳಬಾರದ ನಿಷ್ಠುರ ವಾಕ್ಯಗಳಿಂದಲೂ ನಿಂದಿಸಿದುದಕ್ಕೆ ನನಗೆ ತಕ್ಕ ಶಿಕ್ಷೆಯಾಯಿತು. ನಾನು ಮನೋವಾಕ್ಕಾಯಗಳಿಂದ ನನ್ನ ಹೃದಯೇಶ್ವರನಾದ ನಿಮ್ಮಣ್ಣನಾದ ಶ್ರೀರಾಮನನ್ನಲ್ಲದೆ ಇತರರನ್ನು ಕಣ್ಣೆತ್ತಿಯೂ ನೋಡಿಲ್ಲವೆಂಬುದಕ್ಕೆ ಸಕಲ ದೇವತೆಗಳೂ, ಪಂಚಭೂತಗಳೂ, ನನ್ನ ಅಂತರಾತ್ಮವೂ ಸಾಕ್ಷಿಯಾಗಿರುವರು. ಆದರೆ ಈಗ ಶ್ರೀರಾಮನು ಲೋಕಾಪವಾದಕ್ಕಂಜಿ ನನ್ನ ಚರಿತ್ರೆಯ ವಿಷಯದಲ್ಲಿ ಸಂದೇಹಿಸುವನಾದುದರಿಂದ, ನಾನೀಗ ಅಗ್ನಿಪ್ರವೇಶಮಾಡಿ ಈ ದೇಹವನ್ನು ತ್ಯಜಿಸು

ವೆನು. ಅಗ್ನಿಕುಂಡವನ್ನು ಸಿದ್ಧಗೊಳಿಸು. ಇದುವರೆಗೆ ಅರಣ್ಯವಾಸದಲ್ಲಿ ನನಗೆ ಅಗಾಧವಾಗಿ ಸೇವೆಮಾಡಿರುವೆ. ಆದರ ಉಪಕಾರವನ್ನು ನಾನು ಎಂದಿಗೂ ತೀರಿಸಲಾರೆನು. ಈಗ ಈ ಕೊನೆಯ ಒಂದು ಸೇವೆಯನ್ನೂ ಮಾಡಿ, ನನ್ನನ್ನು ಉದ್ಧರಿಸು' ಎನ್ನುವಳು. ತನ್ನ ಅತ್ತಿಗೆಯ ಆ ಮಾತುಗಳನ್ನು ಕೇಳಿ ಲಕ್ಷ್ಮಣನು ಅಗಾಧ ವ್ಯಸನದಿಂದ ಕಣ್ಣೀರು ಸುರಿಸುತ್ತಾ ಶ್ರೀರಾಮನ ಮುಖವನ್ನು ನೋಡಿ, ಆತನ ಅನುಜ್ಞೆಯಿಂದ, ಭಯಂಕರವಾದ ಅಗ್ನಿಕುಂಡವನ್ನು ಸಿದ್ಧಗೊಳಿಸುವನು. ಸೀತಾದೇವಿಯು ಶ್ರೀರಾಮನ ಚರಣಕಮಲಗಳನ್ನು ಸ್ಮರಿಸಿಕೊಳ್ಳುತ್ತ, ಅದರಲ್ಲಿ ಪ್ರವೇಶಿಸುವಳು. ಆಗ ಅಗ್ನಿಯು ಸ್ವಸ್ವರೂಪದಿಂದ ಭಯಭಕ್ತಿಯುತನಾಗಿ ಆಕೆಯನ್ನು-ಮುಡಿದ ಹೂವು ಸಹ ಬಾಡದಂತೆ ಶ್ರೀರಾಮನಿಗೆ ತಂದೊಪ್ಪಿಸಿ, ಆಕೆಯ ಪತಿವ್ರತಾ ಮಹಿಮೆಯು ಅದ್ಭುತವಾದುದೆಂದೂ ನಿಶ್ಶಂಕೆಯಿಂದ ಆಕೆಯನ್ನು-ಪರಿಗ್ರಹಿಸೆಂದೂ ಹೇಳುವನು. ತರುವಾಯ ಶ್ರೀರಾಮನು ಬ್ರಹ್ಮದೇವನ ಮತ್ತು ತನ್ನ ತಂದೆಯಾದ ದಶರಥನ ವಾಕ್ಯಗಳಿಂದ ಮನಸ್ಸಮಾಧಾನ ಹೊಂದಿ, ಸೀತೆಯನ್ನು ಪುನಃ ಪರಿಗ್ರಹಿಸಿ, ಲಕ್ಷ್ಮಣನಿಂದ ವಿಭೀಷಣನಿಗೆ ಲಂಕಾರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿಸಿ, ಎಲ್ಲರೊಡನೆ ಪುಷ್ಪಕ ವಿಮಾನವನ್ನೇರಿ, ಅಯೋಧ್ಯಾಭಿಮುಖವಾಗಿ ಪ್ರಯಾಣ ಮಾಡಿದನು.



## ಅಧ್ಯಾಯ ೫ 'ಸೀತಾ ವನವಾಸ'

ಲಕ್ಷ್ಮಣನು ಅರಣ್ಯದಲ್ಲಿದ್ದು ಜಟಾಚೀರಧಾರಿಯಾಗಿ ಹದಿನಾಲ್ಕು ವರ್ಷಕಾಲ ಶ್ರೀರಾಮಸೇವೆಮಾಡಿ ಧನ್ಯನಾದನಲ್ಲವೆ! ಅವನಂತೆಯೇ ರಾಜ್ಯದಲ್ಲಿದ್ದ ಭರತನೂ, ಜಟಾಚೀರಧಾರಿಯಾಗಿ ತಪಸ್ವಿಯಂತೆ ವ್ರತನಿಷ್ಠನಾಗಿ ಶ್ರೀರಾಮಸೇವೆಯಲ್ಲಿ ತೊಡಗಿದ್ದನು. ಭರತನು ರಾಮಲಕ್ಷ್ಮಣರಂತೆ ತಾಪಸವ್ರತಧಾರಿಯಾಗಿರಬೇಕಾದ ನಿರ್ಬಂಧವಿರಲಿಲ್ಲ. ಅವನ ತಾಯಿಯು ಗಳಿಸಿ ಕೊಟ್ಟಿದ್ದ ರಾಜ್ಯದಲ್ಲಿ ಸಿಂಹಾಸನಾರೋಹಣ ಮಾಡಿ, ಅವನು ಸುಖ

ವಾಗಿರಬಹುದಾಗಿದ್ದಿತು. ಆದರೆ, ಭರತನೂ ಲಕ್ಷ್ಮಣನಂತೆಯೇ ಶ್ರೀರಾಮನ ಪಾದಗಳಲ್ಲಿ ಅನನ್ಯ ಭಕ್ತಿಯಿಟ್ಟು, ಆತನು ಏರಬೇಕಾದ ಸಿಂಹಾಸನವನ್ನು ಏರಲು ತನಗೇನೂ ಅಧಿಕಾರವಿಲ್ಲವೆಂದು ಆ ತ ನ ಪಾದುಕೆಗಳನ್ನು ಬೇಡಿ ತಂದು ಅವುಗಳನ್ನೇ ಸಿಂಹಾಸನದ ಮೇಲಿಟ್ಟು, ತಾನು ಮಾಡಿದ ರಾಜ ಕಾರ್ಯಗಳನ್ನು ಅವುಗಳಿಗೆ ನಿವೇದನ ಮಾಡುತ್ತ, ಕೇವಲ ರಾಮನಿಗೆ ದಾಸ ನೆಂಬಂತೆ ನಡೆದುಕೊಂಡಿದ್ದನು. ಮಾತ್ರವಲ್ಲ-ಹದಿನಾಲ್ಕು ವರ್ಷಗಳು ಕಳೆ ದ ಮಾರನೆಯ ದಿನವೇ ತನಗೆ ಶ್ರೀರಾಮನು ದರ್ಶನ ಕೊಡದಿದ್ದರೆ, ಅಗ್ನಿ ಪ್ರವೇಶಮಾಡಿ ದೇಹತ್ಯಾಗ ಮಾಡುವೆನೆಂದು ಪ್ರತಿಜ್ಞೆ ಮಾಡಿದ್ದನು. ಭರ ತನ ಈ ಪ್ರತಿಜ್ಞೆಯನ್ನು ತಿಳಿದಿದ್ದ ರಾಮನು ತಾವು ಪುಷ್ಪಕ ವಿಮಾನದಲ್ಲಿ ಕುಳಿತು ಪ್ರಯಾಣ ಹೊರಟೊಡನೆಯೇ, ಆದಷ್ಟು ಶೀಘ್ರವಾಗಿ ಮಾರ್ಗ ಕ್ರಮಣ ಮಾಡುತ್ತ ಬಂದನಾದರೂ. ಭರದ್ವಾಜ ಮಹರ್ಷಿಗಳ ಆಶ್ರಮದ ಬಳಿ, ಅವರ ಆಶಯದಂತೆ ನಿಲ್ಲಲೇಬೇಕಾಯಿತು. ಆಗ ಆತನು ಒಡನೆ ಆಂಜನೇಯನಿಂದ, ತಾನು ಸೀತಾ ಲಕ್ಷ್ಮಣ ಸಮೇತನಾಗಿ ಬರುತ್ತಿರುವೆನೆಂ ದೂ ಅಗ್ನಿಪ್ರವೇಶ ಮಾಡಬೇಡವೆಂದೂ ಹೇಳಿ ಕಳುಹಿಸಿದನು. ಆಂಜನೇ ಯನೂ ಸಕಾಲಕ್ಕೆ ಬಂದು ಅಗ್ನಿಕುಂಡವನ್ನು ಸುತ್ತುತ್ತಿದ್ದ ಭರತನನ್ನು ಅಂತರಿಕ್ಷದಿಂದಲೇ ಕಂಡು, 'ಕುಶಲ-ರಾಮನಿಗೆ, ಕುಶಲ-ರಾಮನಿಗೆ' ಎಂದು ನು ಡಿ ದು ಆತನನ್ನು ಅ ಪಾ ಯ ದಿ ಂ ದ ಪಾರು ಮಾಡಿ, ತರು ವಾಯ ಕೆಳಗಿಳಿದು ಶ್ರೀರಾಮಾದಿಗಳ ಯೋಗಕ್ಷೇಮವನ್ನು ಸವಿಸ್ತಾರವಾಗಿ ತಿಳಿಸಿ ಸಕಲರನ್ನೂ ಸಂತೋಷಗೊಳಿಸಿದನು. ತರುವಾಯ ಸ್ವಲ್ಪ ಹೊತ್ತಿ ನಲ್ಲಿಯೇ ಪುಷ್ಪಕವಿಮಾನವು ದೃಷ್ಟಿಗೋಚರವಾಯಿತು. ಶ್ರೀ ಸೀತಾರಾ ಮಲಕ್ಷ್ಮಣರ ದರ್ಶನದಿಂದ ಸಕಲರೂ ಪರಮ ಸಂತೋಷ ಪಟ್ಟರು. ಶ್ರೀರಾ ಮನು ಪುಷ್ಪಕದಿಂದಿಳಿದು ತನಗಾಗಿ ಅಗಾಧ ಕಷ್ಟ ಸಹನಮಾಡಿದ ತಮ್ಮಂದಿ ರನ್ನು ಬೇರೆ ಬೇರೆಯಾಗಿ ಆಲಂಗಿಸಿ ಸಂತೈಸಿದನು. ಪರಿಜನ ಪುರಜನಗ ಳನ್ನು ಮೃದುವಚನಗಳಿಂದ ಆದರಿಸಿದನು. ವಸಿಷ್ಠಾದಿ ಗುರುಜನರ ಪಾದ ಗಳಿಗೆ ನಮಸ್ಕರಿಸಿ ಆಶೀರ್ವಾದ ಪಡೆದನು. ತರುವಾಯ ಎಲ್ಲರೊಂದಿಗೆ ಕೌ ಸಲ್ಯಾ ಸುಮಿತ್ರೆ ಕೈಕೇಯಿಯರಿದ್ದ ಸ್ಥಳಗಳಿಗೆ ಹೋಗಿ,ಅವರಿಗೆ ನಮಸ್ಕಾರ ಮಾಡಿ, ಅವರ ಯೋಗಕ್ಷೇಮವನ್ನು ಕೇಳಿ, ಆಶೀರ್ವಾದ ಪಡೆದು, ಅವರ

ನ್ನು ಸಂತೋಷಪಡಿಸಿದನು. ಮುಂದೆ, ಸಕಲರ ಪ್ರಾರ್ಥನೆಯನ್ನೂ ಅಂಗೀಕರಿಸಿ, ಮುನಿವೇಷವನ್ನು ವಿಸರ್ಜಿಸಿ ಮಂಗಳ ಸ್ನಾನಮಾಡಿ, ದಿವ್ಯವಸ್ತ್ರಾಭರಣಾದಿಗಳಿಂದ ಅಲಂಕೃತರಾಗಿ ನಾಲ್ಕುಮಂದಿ ಸಹೋದರರೂ ದಶರಥರಾಜನು ಆರ್ಜಿಸಿಟ್ಟ ಪುರುಷಾರ್ಥಗಳೋ ಎಂಬಂತೆ ಒಪ್ಪುತ್ತ, ಸಕಲರಿಗೂ ನೇತ್ರಾನಂದವನ್ನುಂಟುಮಾಡಿದರು. ರಾಮನು ಅಯೋಧ್ಯೆಯಲ್ಲಿ ಸೂರ್ಯವಂಶದ ಪೂರ್ವಿಕರಾಜಶ್ರೇಷ್ಠರು ಏರಿದ್ದ ಅನರ್ಘ್ಯರತ್ನ ಮಾಣಿಕ್ಯಗಳಿಂದ ಅಲಂಕೃತವಾದ ದಿವ್ಯ ಸಿಂಹಾಸನವನ್ನು ಏರಿದನು. ಲಕ್ಷ್ಮಣಸ್ವಾಮಿಗೆ ಆಗ ಉಂಟಾದ ಆನಂದಕ್ಕೆ ಪಾರವಿಲ್ಲ. ಸೀತಾದೇವಿಯೊಂದಿಗೆ ಸಿಂಹಾಸನದಲ್ಲಿ ಕುಳಿತ ಶ್ರೀರಾಮಚಂದ್ರನಿಗೆ ಲಕ್ಷ್ಮಣಸ್ವಾಮಿಯು ಶ್ವೇತಚ್ಛತ್ರವನ್ನು ಹಿಡಿದು ಸೇವೆ ಮಾಡಿದನು. ಭರತ ಶತ್ರುಘ್ನರು ಚಾಮರಗಳನ್ನು ಬೀಸುತ್ತಿದ್ದರು. ವಸಿಷ್ಠಾದಿ ಮಹರ್ಷಿಗಳು ದಿವ್ಯ ನದೀ ಉದಕಗಳಿಂದ ಅಭಿಷೇಕಿಸಿ, ಮನದಣಿಯೆ ಆಶೀರ್ವದಿಸಿದರು. ಕೌಸಲ್ಯಾದಿ ಹಿರಿಯರು ತಮ್ಮ ಮಕ್ಕಳ ವೈಭವವನ್ನು ನೋಡಿ ಪರಮ ಸಂತುಷ್ಟರಾದರು. ಪ್ರಜೆಪರಿವಾರಗಳವರು, ಶ್ರೀರಾಮ ಪಟ್ಟಾಭಿಷೇಕ ಮಹೋತ್ಸವವನ್ನು ನೋಡಿ ಪರಮಾನಂದದಿಂದ ಜಯಜಯಕಾರ ಮಾಡಿದರು. ಸಕಲರನ್ನೂ ದಿವ್ಯ ಭಕ್ಷ್ಯಭೋಜ್ಯಗಳಿಂದ ಕೂಡಿದ ಮೃಷ್ಟಾನ್ನಭೋಜನದಿಂದ ಸಂತುಷ್ಟಿಗೊಳಿಸಿ ಶ್ರೀರಾಮಾದಿಗಳು ಅವರ ಪ್ರೇಮಾದರಗಳಿಗೆ ಪಾತ್ರರಾದರು. ತರುವಾಯ ಶ್ರೀರಾಮನು ಸರ್ವಲೋಕವಂದ್ಯನಾಗಿ, ಧರ್ಮದಿಂದ ರಾಜ್ಯಪರಿಪಾಲನೆ ಮಾಡುತ್ತ, ಅಯೋಧ್ಯೆಯಲ್ಲಿ ಬಹುಕಾಲ ಸುಖವಾಗಿದ್ದನು.

ಶ್ರೀರಾಮಚಂದ್ರನು ಪಾಲಿಸುತ್ತಿರಲು ಭೂಮಂಡಲವು ಸಕಲ ಸುಖಸಂಪತ್ತುಗಳಿಗೂ ನೆಲೆವೀಡಾಗಿ, ಸಕಲ ಧರ್ಮಕಾರ್ಯಗಳಿಗೂ ಮಾತೃಸ್ಥಾನವೆನಿಸಿ, ಸತ್ಯ ಶೌಚ ಇಂದ್ರಿಯನಿಗ್ರಹಾದಿ ಸದ್ಗುಣಗಳಿಗೆ ತೌರೂರೆನ್ನಿಸಿ ಲೋಕದಲ್ಲಿ ಅದ್ವಿತೀಯವೆನ್ನಿಸಿ ಪ್ರಕಾಶಿಸಿತು. ಹೀಗೆ ರಾಜ್ಯಭಾರಮಾಡುತ್ತಿದ್ದ ಶ್ರೀರಾಮನಿಗೆ ಮಕ್ಕಳಾಗಲಿಲ್ಲವೆಂಬ ಒಂದು ಯೋಚನೆಯಲ್ಲದೆ ಮತ್ತಾವ ಕೊರತೆಯೂ ಇರಲಿಲ್ಲ. ಶ್ರೀರಾಮನಂತೆಯೇ ಸೀತೆಯೂ ಸಹ ತನ್ನ ಉದರದಲ್ಲಿ ಪುತ್ರೋದಯವಾಗಲಿಲ್ಲವೆಂಬ ಚಿಂತೆಯಿಂದ ಕೊರಗುತ್ತಿದ್ದಳು. ಹೀಗಿರುವಲ್ಲಿ ಕುಲಗುರುಗಳಾದ ವಸಿಷ್ಠಮಹರ್ಷಿಗಳು ಒಂದು ದಿನ ಬಂದು

ಶ್ರೀರಾಮನಿಗೆ, ಇನ್ನು ನಿನ್ನ ಉದರದಲ್ಲಿ ಸಂತಾನೋದಯವಾಗುವುದು. ಚಿಂತೆಮಾಡಬೇಡಿರಿ. ಎಂದು ಭರವಸೆಯ ವಚನವನ್ನು ನುಡಿದರು. ಅದನ್ನು ಕೇಳಿ, ಸೀತೆಯೂ ಶ್ರೀರಾಮನೂ ಪರಮಸಂಭ್ರಮಯುಕ್ತರಾಗಿ ಸಂತೋಷ ದಿಂದ ಕಾಲಯಾಪನೆಮಾಡಿಕೊಂಡಿರುತ್ತಿರಲು ಮುಂದೆ ಕೆಲವು ದಿನಗಳಲ್ಲೇ ಸೀತಾದೇವಿಯು ಗರ್ಭಧಾರಣ ಮಾಡಿರುವಳೆಂಬ ಶುಭವರ್ತಮಾನವು ಶ್ರೀ ರಾಮನಿಗೆ ತಿಳಿದು, ಆತನನ್ನು ಸಂತೋಷ ಶರಧಿಯಲ್ಲಿ ಓಲಾಡಿಸಿತು.

ಹೀಗಿರಲು ಮುಂದೊಂದು ದಿನ ಸೀತೆಯು ಶ್ರೀರಾಮನನ್ನು ಕಂಡು ತಾನು ಹಿಂದಿನಂತೆಯೇ ಒಮ್ಮೆ ಋಷಿಪತ್ನಿಯರನ್ನು ಕಂಡು, ಅವರಿಗೆ ಹರಿ ದ್ರಾ ಕುಂಕುಮ ವೀಳಯಾದಿಗಳನ್ನೂ ವಸ್ತ್ರ ಭೂಷಣಾದಿಗಳನ್ನೂ ಕೊಟ್ಟು ಆದರಿಸಿ ಬರಬೇಕೆಂದು ಆಸೆಯಾಗುತ್ತದೆಯೆಂದು ಭರ್ತನೆದುರಿಗೆ ಹೇಳಿಕೊಂ ಡಳು. ಶ್ರೀರಾಮನಾದರೂ ತುಂಬು ಗರ್ಭಿಣಿಯಾದ ತನ್ನ ಪತ್ನಿಯ ಬಯ ಕೆಯನ್ನು ನೆರವೇರಿಸುವೆನೆಂದು ವಾಗ್ದಾನಮಾಡಿದ್ದನು. ಮುಂದೆ ಬಹು ಸ್ವಲ್ಪ ಕಾಲದಲ್ಲೇ ಅದಕ್ಕೊಂದು ಅವಕಾಶವೂ ಉಂಟಾಯಿತು. ಆದರೆ ಆ ಸಂದರ್ಭವು ದುರಂತವಾದುದು. ಭಯಂಕರವಾದುದು. ಕಡುಶೋಚ ನೀಯವಾದುದು.

ಶ್ರೀರಾಮನಿಗೆ ತನ್ನ ರಾಜ್ಯಭಾರದ ವಿಷಯದಲ್ಲಿ ಪ್ರಜಾಭಿಪ್ರಾಯವೇ ನಿದೆಯೋ ತಿಳಿಯಬೇಕೆನ್ನಿಸಲು, ಕೆಲವಂದಿ ಗುಪ್ತಚಾರರನ್ನು ನೇಮಿಸಿದ್ದ ನು. ಅವರು ರಾಜಧಾನಿಯಲ್ಲಿ ಸಂಚರಿಸಿ, ಎಲ್ಲೆಲ್ಲೂ ಶ್ರೀರಾಮನ ಗುಣಪ್ರ ಶಂಸೆಯೇ ನಡೆಯುತ್ತಿರುವುದನ್ನೂ, ಜನರು ಆತನ ಧರ್ಮಮಯ ರಾಜ್ಯಭಾರ ವನ್ನು ಮುಕ್ತಕಂಠದಿಂದ ವರ್ಣಿಸುತ್ತಿರುವುದನ್ನೂ ತಿಳಿದುಬಂದು ನಿವೇದಿ ಸಿದರು. ಆ ದೂತರಲ್ಲಿ ಒಬ್ಬನು ಮಾತ್ರ, ತಾನು ತಿಳಿದ ವರ್ತಮಾನವನ್ನು ಹೇಳಲು ಸಂಕೋಚಗೊಂಡಿರಲು, ಶ್ರೀರಾಮನು ಆ ಸಂಗತಿಯೇನೋ ಸ್ಪ ಷ್ಟವಾಗಿ ಹೇಳೆಂದು ಬಲವಂತಪಡಿಸಿದನು. ಆಗ ಅವನು -' ಸ್ವಾಮಿ ಈ ಊರಲ್ಲಿ ವಾಸಿಸುವ ರಜಕನೊಬ್ಬನು, ತನ್ನನ್ನು ಕೇಳದೆ ತಾಯಿ ಮನೆಗೆ ಹೋಗಿದ್ದ ತನ್ನ ಹೆಂಡತಿಯನ್ನು ದಂಡಿಸುತ್ತಾ, ಆಕೆಯ ತಾಯಿ ತಂದೆ ಗಳು ಬಂದು ಬೇಡಿಕೊಂಡರೂ ಕೇಳದೆ, -'ಬಿಟ್ಟ ಹೆಂಡತಿಯನ್ನು ಕೂಡಿ ಆಳಲು ನಾನೇನು ರಾಮನಲ್ಲ' ಎಂದು ನಿಷ್ಠುರವಾಗಿ ನುಡಿದನು, ಎಂದು ತಿಳಿ

ಯುಪಡಿಸಿದನು. ಒಡನೆ ಶ್ರೀರಾಮನು ಸಿಡಿಲು ಬಡಿದವನಂತೆ ನಿಶ್ಚೇಷ್ಟಿತನಾಗಿ, –' ಅಕ್ಕಟಾ, ನಾನು ಎಷ್ಟು ಜಾಗರೂಕನಾಗಿದ್ದರೂ ಲೋಕಾಪವಾದವು ಬಂದುಬಿಟ್ಟಿತು. ಇನ್ನು ಅದನ್ನು ಅಲಕ್ಷ್ಯಮಾಡದೆ ನೀಗಿಸಿಕೊಳ್ಳಲು ಪ್ರಯತ್ನಿಸಬೇಕು' ಎಂದುಕೊಂಡು ಸೀತೆಯನ್ನು ಕಾಡಿಗೆ ಕಳುಹಿಸಿಬಿಡಲು ನಿರ್ಧರಿಸುವನು. ಈ ಭಯಂಕರ ವಾರ್ತೆಯನ್ನು ಕೇಳಿ ಭರತ ಶತ್ರುಘ್ನರು ಬಂದು, ತುಂಬು ಗರ್ಭಿಣಿಯಾದ ಸೀತೆಯನ್ನು - ನಿರಪರಾಧಿನಿಯಾದ ಆ ಜಗನ್ಮಾತೆಯನ್ನು-ಬ್ರಹ್ಮಾದಿ ದೇವತೆಗಳಿಂದಲೇ ಪರಿಶುದ್ಧಳೆಂದು ಪ್ರಶಂಸಿತಳಾದ ಆ ಸಾಧ್ವೀಮಣಿಯನ್ನು, ಒಬ್ಬ ರಜಕನ ಮಾತಿಗಾಗಿ ಅರಣ್ಯದ ಪಾಲುಮಾಡಬಾರದೆಂದು ಎಷ್ಟೋ ಬೇಡಿಕೊಳ್ಳುವರು. ಆದರೂ ಏನೂ ಪ್ರಯೋಜನವಾಗಲಿಲ್ಲ. ಕೊನೆಗೆ ಶ್ರೀರಾಮನು ಲಕ್ಷ್ಮಣನನ್ನು ಕರೆದು- 'ತಮ್ಮಾ ಲಕ್ಷ್ಮಣಾ, ನೀನು ನನ್ನ ಮಾತನ್ನು ಎಂದೂ ಮೀರಿದವನಲ್ಲ. ಸೀತೆಯು ಪತಿವ್ರತೆಯೆಂಬುದನ್ನೂ, ಪರಿಶುದ್ಧಾತ್ಮಳೆಂಬುದನ್ನೂ ನಾನು ಬಲ್ಲೆ. ಆದರೆ ಅವಳು ಲೋಕಾಪವಾದಕ್ಕೆ ಗುರಿಯಾದಮೇಲೆ, ಆ ಸಂಗತಿಯನ್ನು ಕಾಣದವನಂತೆ ಕೇಳದವನಂತೆ ನಟಿಸಿ ಆಕೆಯನ್ನು ಅರಮನೆಯಲ್ಲಿ ಟ್ಟುಕೊಂಡು ಅವಳೊಂದಿಗೆ ಬಾಳ್ವೆಮಾಡುತ್ತಿರಲು ನನ್ನ ಮನಸ್ಸೊಪ್ಪದು. ಅವಳನ್ನು ರಥವನ್ನೇರಿಸಿ ಕರೆದೊಯ್ದು ಇಂದೇ ಅರಣ್ಯದಲ್ಲಿ ಬಿಟ್ಟುಬಾ; ಇದೇ ನೀನು ನನಗೆ ಮಾಡಬೇಕಾದ ಕೊನೆಯ ಸೇವೆಯು-ಸಹಾಯವು' ಎಂದು ನುಡಿದು ಸುಮ್ಮನಾದನು. ಲಕ್ಷ್ಮಣನು ಎಷ್ಟೋ ಬಗೆಯಿಂದ ಹೇಳಿದ ಸಮಾಧಾನ ವಾಕ್ಯಗಳು ಏನೂ ಪ್ರಯೋಜನಕ್ಕೆ ಬರಲಿಲ್ಲ. ಮುಂದೇನೂ ಮಾರ್ಗತೋರದೆ ಕಣ್ಣೀರಿಡುತ್ತ ಲಕ್ಷ್ಮಣನು, ರಥವನ್ನು ಸಿದ್ಧಗೊಳಿಸಿಕೊಂಡು, ಸೀತಾದೇವಿಯ ಅಂತಃಪುರಕ್ಕೆ ನಡೆದು, ಆಕೆಯ ಇಷ್ಟದಂತೆ ವನಕ್ಕೆ ಕರೆದೊಯ್ಯಬೇಕೆಂದು ಶ್ರೀರಾಮಾಜ್ಞೆಯಾಗಿರುವುದೆಂದು ತಿಳಿಯಪಡಿಸಿದನು. ತನಗೆ ಪ್ರಾಪ್ತವಾದ ದುರಂತ ಸಂಕಟದ ಸೂಚನೆ ಲೇಶವನ್ನೂ ಅರಿಯದ ನಿಷ್ಕಲ್ಮಷ ಚಿತ್ತಳಾದ ಆ ಸಾಧ್ವೀಮಣಿಯು ಒಡನೆ, ಮುನಿಪತ್ನಿಯರಿಗೆ ಕೊಡಲು ಬೇಕಾದ ಸಕಲ ವಸ್ತುಗಳನ್ನೂ ಸಿದ್ಧಗೊಳಿಸಿಕೊಂಡು ಬಹು ಸಂಭ್ರಮದಿಂದ ನಡೆದು ರಥವೇರಿ ಕುಳಿತುಕೊಂಡಳು. ಸರಿ, ಮುಂದೆ ಹೇಳಬೇಕಾದುದೇನು! ರಥವು ಅಯೋಧ್ಯೆಯನ್ನು ಬಿಟ್ಟು ವನಾಭಿಮುಖ

ವಾಗಿ ನಡೆಯಿತು. ಲಕ್ಷ್ಮಣನು ತನ್ನ ಹೃದಯವನ್ನು ದಹಿಸುತ್ತಿದ್ದ ಆ ದುರ್ವಾರ್ತೆಯನ್ನು ಆಕೆಗೆ ತಿಳಿಸಲಾರದೆ, ತಿಳಿಸದಿರಲಾರದೆ ಬಹು ಸಂಕಟಕ್ಕೆ ಗುರಿಯಾಗಿ, ಮೌನವಾಗಿ ಮಾರ್ಗಕ್ರಮಣ ಮಾಡುತ್ತ ರಥವನ್ನು ಬಿಟ್ಟುಕೊಂಡು ಹೋದನು. ಮುಂದೆ ಮುಂದೆ ಸಾಗಿದಂತೆಲ್ಲ, ತಪೋವನದ ಮಾರ್ಗ ಕಾಣಿಸದೆ, ಘೋರಾರಣ್ಯವೇ ಕಂಡುಬರುತ್ತಿರಲು ಸೀತಾದೇವಿಯು, ಗಾಬರಿಪಟ್ಟು -' ಅಣ್ಣಾ ಲಕ್ಷ್ಮಣಾ, ಇದೇನು, ನಾವು ಋಷ್ಯಾಶ್ರಮಗಳಿಗೆಂದಲ್ಲವೆ ಹೊರಟುದು. ಈ ಘೋರಾಟವಿಯಲ್ಲಿ ಋಷ್ಯಾಶ್ರಮಗಳಿರಬಲ್ಲುವೆ? ಇದೇನು, ಹೀಗೆ ಬಂದುಬಿಟ್ಟೆಯಲ್ಲಾ! ಏನು, ದಾರಿ ತಪ್ಪಿದೆಯಾ, ಏಕೆ? ಮಾತನಾಡದೆ ಮೌನವಾಗಿಯೇ ಇರುವೆಯಲ್ಲಾ! ನಿನ್ನ ಮುಖಭಾವದಿಂದ ಏನೋ ದುಗುಡದಿಂದಿರುವಂತೆ ಕಂಡುಬರುವುದಲ್ಲಾ! ಕಾರಣವೇನು ಹೇಳು!' ಎಂದು ಪ್ರಶ್ನೆಮಾಡಿದಳು.

ಸೀತೆಯಾಡಿದ ಆ ಮಾತಿಗೆ ಲಕ್ಷ್ಮಣನು ಏನೆಂದು ಉತ್ತರಕೊಡಬಲ್ಲನು?-ಅಕ್ಕಟಾ, ನಾನೀಗ ಈ ಸಾಧ್ವೀಮಣಿಗೆ ಏನೆಂದು ಉತ್ತರಕೊಡಲಿ! ಶ್ರೀರಾಮನು ಆಜ್ಞಾಪಿಸಿರುವ ನಿಷ್ಠುರವಾದ ವಚನವನ್ನು ನುಡಿಯಲೋ, ನುಡಿಯದಿರಲೋ, ಏನುಮಾಡಲಿ! ರಘುಕುಲ ಸಾರ್ವಭೌಮನ ಮಡದಿಯಾದ ಈ ಸಾಧ್ವಿಯನ್ನು, ತುಂಬು ಗರ್ಭಿಣಿಯಾಗಿರುವ ಈ ಅಬಲೆಯನ್ನು ಏಕಾಕಿನಿಯನ್ನಾಗಿ ಅಡವಿಯಲ್ಲಿ ಹೇಗೆ ಬಿಟ್ಟುಹೋಗಲಿ? ಎಲ್ಲಕ್ಕಿಂತಲೂ ಹೆಚ್ಚಾಗಿ, ಈ ಸಂಗತಿಯನ್ನು ಈಗ ಈಕೆಗೆ ತಿಳಿಸುವ ಪರಿಯೆಂತು' ಎಂದುಕೊಂಡು, ಹೇಳಿಕೊಳ್ಳಲಾಗದ ಅತಿಶಯ ದುಃಖದಿಂದ ಮರುಗಿದನು.-ಲಕ್ಷ್ಮಣನ ಈ ಸ್ಥಿತಿಯು ಜಾನಕಿಗೆ ಮನಸ್ಸಿನಲ್ಲಿ ಸಂದೇಹವನ್ನುಂಟುಮಾಡಿತು. 'ವತ್ಸಾ, ಲಕ್ಷ್ಮಣಾ, ಇದೇಕೆ? ವಿಶೇಷ ದುಗುಡಗೊಂಡಿರುವಂತೆ ಇರುವೆಯಲ್ಲಾ? ನಿನಗೇನಾಗಿದೆ, ದೇಹ ಸ್ವಾಸ್ಥ್ಯವಿಲ್ಲವೆ? ಅಥವ ನನಗೆ ಅನಿಷ್ಟಕಾರಿಯಾದ ಯಾವುದಾದರೂ ಮಾತನ್ನು ನನಗೆ ಹೇಳಲಾರದೆ ಶಂಕಿಸುತ್ತಿರುವೆಯಾ? ನಿನ್ನ ಈ ಮೌನಕ್ಕೂ, ವ್ಯಸನಕ್ಕೂ ಕಾರಣವೇನು ಹೇಳು,' ಎಂದು ಬಗೆ ಬಗೆಯಿಂದ ಕೇಳತೊಡಗಿದಳು.

ಮುಂದೆ ಲಕ್ಷ್ಮಣನು ದುಃಖವನ್ನು ತಡೆಯಲಾರದೆ, ತುಟಿಗಳು ಅದುರುತ್ತಿರಲು, ಕಂಠದ ನರಗಳು ಉಬ್ಬಿ ಮಾತನಾಡುವುದು ಅಸಾಧ್ಯವಾಗಿರೆ

ಲು, ಉಕ್ಕಿ ಉಕ್ಕಿ ಬರುತ್ತಿದ್ದ ದುಃಖವನ್ನು ಬಹು ಪ್ರಯಾಸದಿಂದ ತಡೆಗಟ್ಟಿಕೊಂಡು, ಕಣ್ಣುಗಳಿಂದ ಧಾರಾಳವಾಗಿ ನೀರು ಸುರಿಯುತ್ತಿರಲಾಗಿ, ಜಗನ್ಮಾತೆಯಾದ ಆಕೆಯನ್ನು ಕಂಡು -'ತಾಯೇ, ಈ ಸಂಗತಿಯನ್ನು ಈವರೆಗೇ ನಿನಗೆ ತಿಳಿಸದಿದ್ದ ನನ್ನ ಶತಾಪರಾಧವನ್ನು ಕ್ಷಮಿಸು. ರಾಮಚಂದ್ರನು, ನಿನ್ನಮೇಲೆ ಲೋಕಾಪವಾದವು ಹೊತ್ತ ಸಂಗತಿಯನ್ನು ತಿಳಿದು, ನಿನ್ನೊಂದಿಗೆ ಬಾಳ್ವೆ ಮಾಡಿಕೊಂಡಿರಲೊಲ್ಲದೆ, ಕಾಡಿನಲ್ಲಿ ಬಿಟ್ಟು ಬಾರೆಂದು ಆಜ್ಞಾಪಿಸಲು, ಆತನ ಆಜ್ಞೆಯನ್ನು ಮೀರಲಾರದೆ ಈ ವಿಪಿನಕ್ಕೆ ನಿನ್ನನ್ನು ಕರತಂದೆನು. ಇನ್ನು ಮುಂದೆ ನೀನು ಮೆಲ್ಲ ಮೆಲ್ಲನೆ ನಡೆದು ಎಲ್ಲಿಗಾದರೂ ಹೋಗಿ ಜೀವಿಸಿಕೊಳ್ಳಬಹುದು' ಎಂದು ನುಡಿದು ಬಿಕ್ಕಿ ಬಿಕ್ಕಿ ಅಳುತ್ತಾ ಮುಂದೇನೂ ತೋರದೆ ನಿಂತುಕೊಂಡನು.

ಲಕ್ಷ್ಮಣನಾಡಿದ ಆ ಮಾತುಗಳು ಕಿವಿಗಳಿಗೆ ಬೀಳುವುದಕ್ಕೆ ಮುಂಚಿತವಾಗಿಯೇ, ಸೀತಾದೇವಿಯು, ಬಿರುಗಾಳಿಯಿಂದ ನಡನಡುಗತ್ತಾ ಮಧ್ಯಕ್ಕೆ ಮುರಿದು ಭೂಮಿಗೆ ಬೀಳುವ ಬಾಳೆಯಮರದಂತೆ,-ಹಾ ಎಂದು ಅರಚಿಕೊಂಡು ಭೂಮಿಗೆ ಬಿದ್ದು ಮೈಮರೆತಳು. ಆ ಅವಸ್ಥೆಯನ್ನು ಕಂಡು ಸೌಮಿತ್ರಿಯು, ತಣ್ಣೀರುತಂದು ತಲೆಗೆ ತಟ್ಟಿ ಎಲೆಗಳಿಂದ ಗಾಳಿಬೀಸುತ್ತಾ -'ಹಾ-ದುರ್ವಿಧಿಯೇ ನಾನು ಈ ಬಗೆಯ ದುರವಸ್ಥೆಯನ್ನೂ ನೋಡಬೇಕಾಯಿತೆ' ಎಂದು ಹಲುಬಿಕೊಂಡನು.

ಮುಂದೆ ಸ್ವಲ್ಪ ಹೊತ್ತಿನಲ್ಲೇ ಎಚ್ಚತ್ತ ಸೀತೆಯು,-'ಲಕ್ಷ್ಮಣಾ, ನಿಮ್ಮಣ್ಣಯ್ಯನು ನಿನ್ನ ಕೈಗೆ ಕತ್ತಿಯನ್ನು ಕೊಟ್ಟು ಕಾಡಿನಲ್ಲಿ ಇವಳ ತಲೆಯನ್ನು ಕತ್ತರಿಸಿ ಬಾ ಎಂದು ಆಜ್ಞಾಪಿಸದೆ, ಕಾಡಿನಲ್ಲಿ ಬಿಟ್ಟು ಬಾ ಎಂದು ಮಾತ್ರ ಆಜ್ಞಾಪಿಸಿದನಲ್ಲಾ, ಶ್ರೀರಾಮನು ಕಾರುಣ್ಯನಿಧಿಯಲ್ಲವೆ? ಅಕಟಾ, ರಾಘವೇಂದ್ರನು ನನ್ನನ್ನು ನಿಷ್ಕಾರಣವಾಗಿ ತ್ಯಜಿಸಲು, ನಾನು ಆತನ ಪಾದಕ್ಕೆ ಏನಪರಾಧ ಮಾಡಿದೆನು? ಅಂದು ಕೌಶಿಕ ಮುನಿಪನೊಂದಿಗೆ ಮಿಥಿಲೆಗೆ ಬಂದು ಹರಧನುವನ್ನು ಭಂಗಿಸಿ ನನ್ನನ್ನು ಕೈಹಿಡಿದಾಗಿನಿಂದಲೂ ಕಷ್ಟಸುಖಗಳಲ್ಲಿ ಆತನೊಂದಿಗೆ ನೆಳಲಿನಂತೆ ಅನುಸರಿಸಿಕೊಂಡು ಬಂದ ನನ್ನಲ್ಲಿ ರಾಘವೇಶ್ವರನು ಇಂದು ಏನು ತಪ್ಪನ್ನು ಕಂಡು ನನ್ನನ್ನು ದೂರೀಕರಿಸಿದನು? ದುರುಳ ರಾವಣನು ವಂಚನೆಯಿಂದ ನನ್ನನ್ನು ಕದ್ದೊಯ್ದು

ಲು, ಕರಡಿ ಕಪಿಗಳನ್ನು ನೆರಹಿಕೊಂಡು ಕಡಲನ್ನು ಕಟ್ಟಿ, ರಾವಣಾದಿಗಳ ನ್ನು ವಧಿಸಿ, ನನ್ನನ್ನು ಅಗ್ನಿಮುಖದಿಂದ ಪರೀಕ್ಷಿಸಿ, ಬ್ರಹ್ಮಾದಿಗಳು ಸಾಕ್ಷ್ಯ ಕೊಟ್ಟಿದ್ದರೂ, ಇನ್ನೂ ನನ್ನಲ್ಲಿ ಲೋಕಾಪವಾದವು ಕಂಡು ಬಂದಿತೆ? ಅಕ ಟಾ, ಸ್ತ್ರೀ ಜನ್ಮವು ಕಡು ಕಷ್ಟತರವಾದುದು?' ಎಂದು ಹಲುಬಿಕೊಳ್ಳು ತ್ತಾ, ದುಃಖ ಸಹನೆ ಮಾಡಲಾರದೆ ಮತ್ತೆ ಮೂರ್ಛೆ ಹೋದಳು.

ಸೌಮಿತ್ರಿಯು, ಮಿಥಿಳೇಂದ್ರನ ಪುತ್ರಿಯೂ, ದಶರಥರಾಜೇಂದ್ರನ ಸೊಸೆಯೂ ಆಗಿದ್ದರೂ ಆ ರಾಜಪುತ್ರಿಗೆ ಉಂಟಾದ ಪರಮ ಶೋಚನೀಯ ವಾದ ಅವಸ್ಥೆಗಾಗಿ ವಿಶೇಷವಾಗಿ ಮರುಗಿ,-'ಅಯ್ಯೋ ಪಾಪಿಯಾದ ಲಕ್ಷ್ಮ ಣನೆ, ಈ ದುಃಖಗಳನ್ನೆಲ್ಲ ನೋಡುವುದು ಇದು ನಿನ್ನ ಆವ ಜನ್ಮದ ದುಷ್ಕ ರ್ಮಫಲವು!' ಎಂದು ಬಾರಿ ಬಾರಿಗೂ ನಿಟ್ಟುಸಿರು ಬಿಡುತ್ತಾ ದುಃಖಿಸುತ್ತಾ ಶೈತ್ಯೋಪಚಾರ ಮಾಡುತ್ತಿರಲು, ಸೀತೆಯು ಪುನಃ ಎಚ್ಚತ್ತು ಕಣ್ದೆರೆದು- ಲಕ್ಷ್ಮಣಾ, ಶ್ರೀರಾಮನೊಂದಿಗೆ ನಾನು ವನವಾಸದಲ್ಲಿ ಅಗಾಧ ಕಷ್ಟಗಳ ನ್ನು ಅನುಭವಿಸಿಕೊಂಡಿದ್ದುದನ್ನು ನೀನು ಕಂಡವನಲ್ಲವೆ? ನಾನುಮಾಡಿದ ತ ಪ್ಪಾದರೂ ಏನು! ಅಂತಹ ನನ್ನ ತಪ್ಪಿಗೆ ಏಕಾಕಿನಿಯಾಗಿ ಅರಣ್ಯದಲ್ಲಿ ಬಿಡು ವುದು ಶಿಕ್ಷೆಯೇ? ಈ ನನ್ನ ಶಿಕ್ಷೆಯು ಸಾಧುವಾದುದೆಂದು ಭರತ ಶತ್ರುಘ್ನರೂ, ಸುಗ್ರೀವ ವಿಭೀಷಣರೂ ಒಪ್ಪಿದರೆ? ಇದಕ್ಕೆ ಆಂಜನೇಯನು ಸಮ್ಮತಿಸಿದನೆ? ಅಲ್ಲದೆ, ಲಕ್ಷ್ಮಣಾ, ಹದಿನಾಲ್ಕು ವರ್ಷಕಾಲ, ನಿನ್ನ ತಾಯಿಯಂತೆ - ನಿನ್ನ ಮಗುವಿನಂತೆ ಆರೈಕೆ ಮಾಡಿ ನನ್ನನ್ನು ಕಾಪಾಡಿದ ಲಕ್ಷ್ಮಣಾ, ನೀನೂ ಇದಕ್ಕೆ ಒಪ್ಪಿ ನನ್ನನ್ನು ಕಾಡಿನಲ್ಲಿ ಬಿಟ್ಟು ಹೋಗಲು ಸಮ್ಮತಿಸಿ ಕರೆದು ತಂದೆಯಾ ತಂದೆ? ಮುಖ್ಯ ಯಾರಿಗೆ ಹೇಳಿ ಏನು ಫಲ! ದುಷ್ಕರ್ಮ ಮಾಡಿ ಹೆಣ್ಣಾಗಿ ಹುಟ್ಟಿದ ನಾನಲ್ಲದೆ, ಮತ್ತಾರು ಇದನ್ನು ಅನುಭವಿಸ ಬೇಕು! ಹೋಗು, ಲಕ್ಷ್ಮಣಾ, ನಾನಿಲ್ಲಿ ಏಕಾಕಿಯಾಗಿರಬಲ್ಲೆನು! ಕಾಡಿನಲ್ಲಿ ನನ್ನೊಂದಿಗಿರಲು ಹುಲಿ ಕರಡಿಗಳೇ ಮುಂತಾದ ಮೃಗಗಳುಂಟು! ಅಲ್ಲಿ ನಿಮ್ಮಣ್ಣನಾದ ರಾಮನು ಏಕಾಕಿಯಾಗಿರುವನು. ಹೋಗು, ನಾನೇನುಮಾ ಡಲಿ. ಈ ಪ್ರಾಣವನ್ನಾದರೂ ನೀಗಿಕೊಳ್ಳಲಾ ಎಂದರೆ ಈ ಗರ್ಭವು ಬೇರೆ ನನಗೆ ವಿಘ್ನಕಾರಿಯಾಗಿರುವುದು. ಅಯ್ಯೋ ನಾನಿನ್ನೇನು ಮಾಡಲಿ' ಎಂದು ಹಲುಬಿಕೊಳ್ಳುತ್ತಾ, ತಲೆಗೆ ಕೈಯಿಟ್ಟು ಚಿಂತಿಸುತ್ತಾ ಕುಳಿತಳು.

ಲಕ್ಷ್ಮಣನು ಮಹದ್ವ್ಯಸನದಿಂದ ಆಕೆಯನ್ನು ಕುರಿತು, -'ಅಮ್ಮಯ್ಯಾ, ನಿನಗೆ ಈ ಬಗೆಯಲ್ಲಿ ಅನ್ಯಾಯವಮಾಡಿದೆವೆಂದು ರಘುಕುಲವನ್ನು ಶಪಿಸದಿರು. ತಾಯೇ, ದುಷ್ಕರ್ಮಫಲವಾಗಿ ಬಂದಿರುವ ಈ ಕಷ್ಟವನ್ನು ತಾಳ್ಮೆಯಿಂದ ಸಹಿಸಿಕೋ !' ಎಂದು ಪುನಃ ಪುನಃ ನಮಸ್ಕರಿಸುತ್ತಾ ಬೇಡಿಕೊಂಡು, ವನಾಭಿಮಾನಿದೇವತೆಗಳಿಗೆಲ್ಲ, ಆ ಭೂಜಾತೆಯನ್ನು ಸುರಕ್ಷಿತವಾಗಿ ಕಾಪಾಡಿರೆಂದು ಪ್ರಾರ್ಥಿಸಿ, ಆಕೆಯನ್ನು ಕಾಡಿನಲ್ಲಿ ಏಕಾಂಗಿಯಾಗಿ ಬಿಡಲಾರದೆ ಬಿಟ್ಟು, ತಾನು ಹಿಂದಿರುಗಿ ಅಯೋಧ್ಯೆಯ ಕಡೆಗೆ ಹೊರಟು ನಡೆದನು. ಇತ್ತ ಶ್ರೀರಾಮನ ಅಗಲುವಿಕೆಯನ್ನೂ ತನಗೆ ಪ್ರಾಪ್ತವಾದ ಆ ವ್ಯಸನ ಭಾರವನ್ನೂ ಸೈರಿಸಿಕೊಳ್ಳಲಾರದೆ ಆ ಜನಕ ಪುತ್ರಿಯು ಪ್ರಾಣತ್ಯಾಗ ಮಾಡಿಕೊಳ್ಳಲು ಉದ್ಯುಕ್ತಳಾಗಿರಲು, ಆ ವೇಳೆಗೆ ವನಕ್ಕೆ ಸಮಿತ್ಕುಶಾದಿಗಳ ಸಂಗ್ರಹಕ್ಕಾಗಿ ಬಂದಿದ್ದ ವಾಲ್ಮೀಕಿ ಮಹರ್ಷಿಗಳು, ಆಕೆಯನ್ನು ಕಂಡು ಸಮಾಧಾನಗೊಳಿಸಿ, ತಮ್ಮೊಂದಿಗೆ ಆಶ್ರಮಕ್ಕೆ ಕರೆದೊಯ್ದು ಉಪಚರಿಸಿದರು.

ಸೀತಾದೇವಿಯು ಮಹಾನುಭಾವರಾದ ವಾಲ್ಮೀಕರ ಆಶ್ರಮದಲ್ಲಿ, ತಂದೆ ತಾಯಿಗಳ ಮನೆಗೆ ಹೆರಿಗೆಗಾಗಿ ಹೋದ ಸಾಧ್ವಿಯಂತೆ, ಶ್ರೀರಾಮನ ಅಗಲಿಕೆಯೊಂದಲ್ಲದೆ ಮತ್ತಾವ ಚಿಂತೆಗೂ ಆಸ್ಪದವಿಲ್ಲದಂತೆ ದಿನಗಳನ್ನು ಕಳೆದು, ಯುಕ್ತಕಾಲದಲ್ಲಿ ಈರ್ವರು ಪುರುಷ ಶಿಶುಗಳನ್ನು ಪ್ರಸವಿಸಿದಳು. ವಾಲ್ಮೀಕರು ಶುಭದಿನದ ಶುಭಮುಹೂರ್ತದಲ್ಲಿ ಜನಿಸಿದ ಆ ಶಿಶುಗಳಿಗೆ ಕ್ಷತ್ರಿಯಸಂಪ್ರದಾಯದಂತೆ ಜಾತಕರ್ಮ ನಾಮಕರಣಾದಿ ಸಕಲ ಶುಭಕರ್ಮಗಳನ್ನೂ ಕಾಲವರಿತು ನೆರವೇರಿಸಿ, ಪ್ರೇಮದಿಂದ ಸಂರಕ್ಷಿಸಿಕೊಂಡು ಬಂದರು. ಕಾಲಕ್ರಮದಲ್ಲಿ ಕುಶ-ಲವರೆಂಬ ಆ ಬಾಲಕರಿಬ್ಬರೂ ಉಪನೀತರಾಗಿ, ಸಕಲ ವಿದ್ಯಾಪಾರಂಗತರಾಗಿ, ಧನುರ್ವೇದ ಮೂರ್ತಿಗಳೋ ಎಂಬಂತೆ ತೇಜಸ್ವಿಗಳಾಗಿ, ಶ್ರೀ ವಾಲ್ಮೀಕಿಮಹರ್ಷಿ ಪ್ರಣೀತವಾದ ಶ್ರೀಮದ್ರಾಮಾಯಣ ಗ್ರಂಥವಾಚನದಲ್ಲಿ ಅದ್ವಿತೀಯ ಕುಶಲರಾಗಿ ಸಕಲರ ಮೆಚ್ಚುಗೆಗೂ ಪಾತ್ರರಾದರು. ಮುಂದೆ ಶ್ರೀರಾಮನು ಅಶ್ವಮೇಧಯಾಗವಮಾಡಲುದ್ಯೋಗಿಸಿದಾಗ, ವಾಲ್ಮೀಕ್ಯಾಶ್ರಮಕ್ಕೆ ಬಂದ ಯಜ್ಞಾಶ್ವವನ್ನು ಕುಶಲವರು ಬಂಧಿಸಲು, ಶ್ರೀರಾಮ ಸೇನೆಗೂ ಬಾಲಕರಿಗೂ ಭಯಂಕರ ಯುದ್ಧ

ನಡೆದು, ಆದರಲ್ಲಿ ಬಾಲಕರೇ ವಿಜಯಿಗಳಾದರು. ಕ್ರಮವಾಗಿ ಶತ್ರುಘ್ನ, ಭರತ, ಲಕ್ಷ್ಮಣ, ಶ್ರೀರಾಮರೂ ಬಾಲಕರೊಂದಿಗೆ ಯುದ್ಧಮಾಡಿ ಸೋತು ಮೂರ್ಛಿತರಾದರು. ತರುವಾಯ ವಾಲ್ಮೀಕಿಮಹರ್ಷಿಗಳು ಆಶ್ರಮಕ್ಕೆ ಬಂದು, ಶ್ರೀರಾಮಾದಿಗಳನ್ನು ಎಚ್ಚರಗೊಳಿಸಿ, ಅವರಿಗೆ ಆ ಮಕ್ಕಳ ಪರಿಚಯಮಾಡಿಸಿ, ಆ ಬಾಲಕರು ಅರಿಯದೆ ಮಾಡಿದ ತಪ್ಪನ್ನು ಮನ್ನಿಸಬೇಕೆಂದು ಪ್ರಾರ್ಥಿಸಿ, ಸಂತೈಸಿದರು.

ತರುವಾಯ ಶ್ರೀರಾಮನು, ಅದ್ಭುತ ತೇಜಸ್ವಿಗಳಾದ ತನ್ನ ಪುತ್ರರನ್ನು ಪೋಷಿಸಿ, ವಿದ್ಯಾವಂತರನ್ನು ಮಾಡಿ, ಅಷ್ಟು ಮಟ್ಟಿಗೆ ಅಭಿವೃದ್ಧಿ ಸ್ಥಿತಿಗೆ ತಂದುದಕ್ಕಾಗಿ, ವಾಲ್ಮೀಕರನ್ನು ಬಹು ವಿಧದಿಂದ ಪ್ರಶಂಸೆ ಮಾಡಿದನು. ಆ ಸಂದರ್ಭದಲ್ಲಿ ವಾಲ್ಮೀಕರು, ಸೀತಾದೇವಿಯನ್ನು ಕರೆದೊಯ್ದು ಶ್ರೀರಾನಿಗೆ ಒಪ್ಪಿಸಿ ಸರ್ವಪರಾಧಗಳನ್ನೂ ಮನ್ನಿಸಬೇಕೆಂದು ಪ್ರಾರ್ಥಿಸಲು, ರಾಘವೇಶ್ವರನು, ಪುತ್ರವಂತಳಾದ ಆ ಸಾಧ್ವೀ ರತ್ನವನ್ನು ಪ್ರೇಮದಿಂದ ಸ್ವೀಕರಿಸಿ ಸಕಲ ಪರಿವಾರದೊಂದಿಗೆ ಅಯೋಧ್ಯೆಯನ್ನು ಕುರಿತು ಪ್ರಯಾಣಮಾಡಿದನು. ಅಶ್ವಮೇಧಮಹಾಯಾಗವು ನಿರ್ವಿಘ್ನವಾಗಿ ನೆರವೇರಿತು. ಮುಂದೆ ಶ್ರೀರಾಮನು ಬಹುಕಾಲ ಧರೆಯನ್ನು ಧರ್ಮದಿಂದ ಪರಿಪಾಲಿಸುತ್ತಾ ಪ್ರಜಾರಂಜಕನಾಗಿದ್ದನು.



# ಉಪಸಂಹಾರ

ನಮ್ಮ ಕಥಾನಾಯಕನಾದ ಲಕ್ಷ್ಮಣನ ಜೀವಿತಧ್ಯೇಯವು ನಿಸ್ವಾರ್ಥ ಸೇವೆ. ಇದು ಆತನ ಒಂದೊಂದು ಕಾರ್ಯದಲ್ಲಿಯೂ ಕಂಡು ಬಂದಿದೆ. ಅಂದು ರಾವಣವಧಾನಂತರ ಪಟ್ಟಾಭಿಷಿಕ್ತನಾದ ಶ್ರೀರಾಮನು ಲಕ್ಷ್ಮಣನನ್ನು ಕುರಿತು,'-ವತ್ಸಾ, ಲಕ್ಷ್ಮಣಾ, ನೀನು ಸಕಲ ಧರ್ಮಗಳನ್ನೂ ಬಲ್ಲವನಾಗಿದ್ದೀಯೆ! ನಿನಗೆ ನಾನು ಹೇಳಿ ತಿಳಿಸಬೇಕಾದುದೇನೂ ಇಲ್ಲ. ಮನುವೇ ಮೊದಲಾದ ನಮ್ಮ ಪುರಾತನ ರಾಜರು ತಮ್ಮ ಬಾಹುಬಲದಿಂದಲೂ ಧರ್ಮದಿಂದಲೂ, ರಕ್ಷಿಸುತ್ತಾ ಬಂದ ಈ ಭೂಮಂಡಲವನ್ನು ಧರಿಸುವ ವಿಷಯದಲ್ಲಿ ಮುಖ್ಯವಾಗಿ ನೀನು ನನಗೆ ಸಹಾಯಕನಾಗಿರಬೇಕು. ನಮ್ಮ ತಾತಂದಿರು ಮುತ್ತಾತಂದಿರು ಮೊದಲಾದ ಹಿರಿಯರು ಪ್ರಯತ್ನಪೂರ್ವಕವಾಗಿ ಪಾಲಿಸುತ್ತ ಬಂದ ಈ ರಾಜ್ಯದಲ್ಲಿ ನೀನೂ ನನ್ನ ಹಾಗೆಯೇ ಸ್ವಲ್ಪ ಭಾರವನ್ನು ವಹಿಸಬೇಕಾದುದರಿಂದ ಯೌವರಾಜ್ಯಾಧಿಪತ್ಯವನ್ನು ಸ್ವೀಕರಿಸಿ ಆ ಭಾರವನ್ನು ವಹಿಸು' ಎಂದು ಹೇಳಿದನು. ಆದರೆ, ಬಾಲ್ಯದಿಂದಲೂ ಕೇವಲ ನಿಸ್ವಾರ್ಥ ಸೇವಾತತ್ಪರನಾಗಿಯೇ ತನ್ನ ಜೀವಮಾನವನ್ನು ಕಳೆದ ಆ ಮಹಾನುಭಾವನು ಆಗ ಯಾವುದೊಂದು ಅಧಿಕಾರ ಸ್ಥಾನವನ್ನೂ ಪಡೆದು ಮೆರೆಯಲಿಚ್ಛಿಸದೆ-' ಶ್ರೀರಾಮಚಂದ್ರಾ, ನನಗೆ ನಿನ್ನ ಸೇವೆಗಿಂತಲೂ ಹೆಚ್ಚಿನ ಯಾವ ಅಧಿಕಾರವೂ ಬೇಕಾದುದಿಲ್ಲ. ಇತರ ಲೌಕಿಕಾಧಿಕಾರಗಳು ನಿನ್ನ ಸೇವೆಯನ್ನು ಮರೆಯಿಸಿ, ನನ್ನ ದೃಷ್ಟಿಯನ್ನು ಅನ್ಯತ್ರ ಎಳೆಯುವುವು. ಆದುದರಿಂದ ನನಗೆ ಯೌವರಾಜ್ಯವಾಗಲಿ, ಮತ್ತಾವ ಪದವಿಯಾಗಲಿ ಬೇಕಾದುದಿಲ್ಲ. ನಿನ್ನ ಸೇವೆಯೊಂದನ್ನು ಮಾತ್ರ ಕರುಣಿಸು' ಎಂದು ನುಡಿದು, ಕೇವಲ ಸೇವಾತತ್ಪರನಾಗಿಯೇ ಇದ್ದುಬಿಟ್ಟನು. ಆಹಾ, ಆ ರಾಜಪುತ್ರನ ನಿಸ್ವಾರ್ಥತೆಯು ಪ್ರಶಂಸನೀಯವಾದುದಲ್ಲವೆ!

ನಿಸ್ವಾರ್ಥಸೇವೆಯ ಮರ್ಮವನ್ನರಿತ ಲಕ್ಷ್ಮಣಸ್ವಾಮಿಯ ನಾಮವು ಆ ಕಾರಣದಿಂದಲೇ ಇರಬಹುದು, - ಪವಿತ್ರ ರಾಮನಾಮದೊಂದಿಗೆ ಬೆರೆತು ಹೋಗಿದೆ. ರಾಮ ಭರತರೆಂದಾಗಲೀ, ರಾಮ ಶತ್ರುಘ್ನರೆಂದಾಗಲೀ ಹೇಳಲಾಗದೆ, ರಾಮಲಕ್ಷ್ಮಣರೆಂಬ ಪದವು ಏಕಪದವೋ ಎಂಬಂತೆ ಲೋಕ

ದಲ್ಲಿ ಉಪಯೋಗಿಸಲ್ಪಡುತ್ತಿದೆ. ಮೇಘಶ್ಯಾಮಮೂರ್ತಿಯಾದ ರಾಮನ ಮೂರ್ತಿಯೊಂದಿಗೆ, ಲಕ್ಷ್ಮಣನನ್ನೂ ಎಡೆಬಿಡದೆ ಕಾಣುತ್ತಿದ್ದೇವೆ. ಸೌಮಿತ್ರಿಯೊಂದೊಡನೆಯೇ, ಆತನ ಮಾತೆಯಾದ ಸುಮಿತ್ರಾದೇವಿಯ ಮತ್ತು, ಪತ್ನಿಯಾದ ಊರ್ಮಿಳಾದೇವಿಯ ಅನನುಪಮ ತ್ಯಾಗದ ಚಿತ್ರವೂ ಕಣ್ಣೆದುರಿಗೆ ಕಟ್ಟಿದಂತಿರುತ್ತದೆ. ವನವಾಸದಿಂದ ಬಂದ ತರುವಾಯ, ಸುಮಿತ್ರಾದೇವಿಯು ತನ್ನ ಮಗನನ್ನು ಮನಸಾರೆ ಆಶೀರ್ವದಿಸಿ, ಅಂತಹ ದೃಢಪ್ರತಿಜ್ಞನಾದ ಮಗನನ್ನು ಹೆತ್ತ ತಾನೇ ಧನ್ಯಳೆಂದುಕೊಂಡಳು. ಊರ್ಮಿಳಾದೇವಿಯೂ, ಹದಿನಾಲ್ಕು ವರ್ಷಗಳವರೆಗೆ ಅವಿಚ್ಛಿನ್ನವಾಗಿ ನಡೆದ ತನ್ನ ಕಠಿನ ವ್ರತವನ್ನು ಸಮಾಪ್ತಮಾಡಿ, - ತಾಪಸವೃತ್ತಿಯನ್ನು ಮುಕ್ತಾಯಗೊಳಿಸಿ ತನ್ನ ಭರ್ತನೊಂದಿಗೆ ಕೂಡಿ, ದಾಂಪತ್ಯಧರ್ಮದಿಂದ ಬಹುಕಾಲಗಳವರೆಗೆ ಸುಖವಾಗಿದ್ದಳು.

ಶ್ರೀರಾಮಚಂದ್ರನಿಗೆ ಪರಮಪ್ರೀತ್ಯಾಸ್ಪದನಾದ, ಲಕ್ಷ್ಮಣಸ್ವಾಮಿಯ ಈ ಜೀವಿತವು, ಶ್ರೀರಾಮಾನುಗ್ರಹದಿಂದ ನಮ್ಮವರಲ್ಲಿ ನಿಸ್ಪೃಹತೆ, ನಿರಾಲಸ್ಯ, ಅನನ್ಯಭಕ್ತಿ, ನಿಶ್ಚಲಮತಿ, ನಿಸ್ವಾರ್ಥಸೇವಾಸಕ್ತಿ ಮುಂತಾದ ಸದ್ಗುಣಗಳನ್ನು ಬೆಳೆಯಿಸಲು ಸಾಧಕಸಾಮಗ್ರಿಯಾಗಿ ಪರಿಣಮಿಸಿ ಲೋಕಕಲ್ಯಾಣವನ್ನುಂಟುಮಾಡಲಿ.

**ತಥಾಸ್ತು.**



೯೧ ಸಾರ್ವಭೌಮ ಪುಲಿಕೇಶಿ
೯೨ ಶ್ರೀ ತ್ಯಾಗರಾಜ ಸ್ವಾಮಿ
೯೩ ಶ್ರೀ ಗೋಂಡಾವಳಿ ಮಹಾರಾಜರು
೯೪ ಕರ್ಮದೇವಿ
೯೫ ಗುರು ಗೋವಿಂದಸಿಂಗ್
೯೬ ರಾಜಾ ರವಿವರ್ಮ
೯೭ ಶ್ರೀ ವ್ಯಾಸರಾಯ ಸ್ವಾಮಿಗಳು
೯೮ ಬಂಕಿಂಚಂದ್ರ ಚಟ್ಟೋಪಾಧ್ಯಾಯ
೯೯ ವಿಶ್ವಾಮಿತ್ರರು
೧೦೦ ಅಜಾಮಿಳ
೧೦೧ ಮಹಾರಾಣಿ ಲಕ್ಷ್ಮಮ್ಮಣ್ಣಿಯವರು
೧೦೨ ಬಲಿಚಕ್ರವರ್ತಿ
೧೦೩ ಭದ್ರಾಚಲ ರಾಮದಾಸರು
೧೦೪ ಸಾಧ್ವೀ ಸುಕನ್ಯಾ
೧೦೫ ಜಯದೇವ ಕವಿ
೧೦೬ ಮಹಾವೀರಸ್ವಾಮಿ
೧೦೭ ವಿದ್ವಾನ್ ರಂಗಾಚಾರ್ಲುಯವರು
**೧೦೮ ಶ್ರೀರಾಮಚಂದ್ರ**
೧೦೯ ಅಬ್ರಹಾಮ್ ಲಿಂಕನ್
೧೧೦ ಬಭ್ರುವಾಹನ
೧೧೧ ಪಾರ್ವತೀದೇವಿ
೧೧೨ ಶ್ರೀ ನಾಮದೇವ
೧೧೩ ಚಾಲುಕ್ಯ ವಿಕ್ರಮ
೧೧೪ ಪೂರ್ಣಯ್ಯನವರು
೧೧೫ ನೆಪೋಲಿಯನ್ ಬೋನಪಾರ್ಟ್
೧೧೬ ಶ್ರೀ ವಾಲ್ಮೀಕಿ ಮಹರ್ಷಿಗಳು
೧೧೭ ಸಕ್ಕೂಬಾಯಿ
೧೧೮ ಜೋಸೆಫ್ ಮ್ಯಾಝಿನಿ
೧೧೯ ಸುರೇಂದ್ರನಾಥ ಬ್ಯಾನರ್ಜಿ
೧೨೦ ಶಿವಪ್ಪನಾಯಕ
೧೨೧ ನಾರದ ಮಹಾಮುನಿಗಳು
೧೨೨ ವೀರರಾಣಿ ರಾಮಾಬಾಯಿ
೧೨೩ ಚಾಮರಾಜ ಒಡೆಯರವರು
೧೨೪ ಪಂಡಿತ ಮೋತೀಲಾಲ್ ನೆಹ್ರೂ
೧೨೫ ಬೆಂಜಮಿನ್ ಫ್ರಾಂಕ್ಲಿನ್ ೧
೧೨೬ ೨
೧೨೭ ಶ್ರೀ ಜನಮೇಜಯ ಮಹಾರಾಜ
೧೨೮ ಶ್ರೀ ಟೀಕಾಚಾರ್ಯರು
೧೨೯ ಜಾರ್ಜ್ ಸ್ಟೀಫನ್ಸನ್
೧೩೦ ದಿಲೀಪ ಮಹಾರಾಜ
೧೩೧ ಸುಭದ್ರಾದೇವಿ
೧೩೨ ಏಕನಾಥಸ್ವಾಮಿ
೧೩೩ ವಲ್ಲಭಾಚಾರ್ಯರು
೧೩೪ ಲಿಯೋ ಟಾಲ್‌ಸ್ಟಾಯ್
೧೩೫ ಶ್ರೀ ರಾಘವೇಂದ್ರ ಸ್ವಾಮಿಗಳು
೧೩೬ ಸಾವಿತ್ರಿ

ಆಗಸ್ಟ್ ತಿಂಗಳ ಸಂಚಿಕೆ ಸಾಕ್ರೆಟೀಸ್

# ಸುಬೋಧ ಪ್ರಕಟನಾಲಯ

## ನ್ಯೂ ಮಾರ್ಕೆಟ್ — ಬೆಂಗಳೂರು ನಗರ.

ಈ ಪತ್ರಿಕೆಯು ಸುಬೋಧ ಮುದ್ರಣಾಲಯದಲ್ಲಿ ಸಂಪಾದಕರಾದ ಯಂ. ರಾಮರಾಯರಿಂದ ಮುದ್ರಿಸಲ್ಪಟ್ಟು ನ್ಯೂ ಮಾರ್ಕೆಟ್ ನಂ. ೧೬ ಸುಬೋಧ ಪ್ರಕಟನಾಲಯದಲ್ಲಿ ಪ್ರಕಟಿಸಲ್ಪಟ್ಟಿತು.